

ಸಂಪುಟ ೬ | ಅಗಸ್ಟ್ ೧೯೪೭ | ಸಂಚಿಕೆ ೫

## ಸಂಪಾದಕನ ಮೊದಲೋಲೆ

ಓದುಗರಾದ ಸೋದರ ಸೋದರಿಯರೇ,

ಸಮರ ಕಾಲದಲ್ಲಿ, ಕೊರವಂಜಿಯು 'ನಮಗೆ ಸ್ವಾತಂತ್ರ್ಯ ಸಿಗುವತನಕ ಖಾಕಿ ಕಾಗದದ ಉಡುವನ್ನೇ ಧರಿಸಿ ಕಾದಾಡುವೆನು. ಸಿಂಗರಿಸಿಕೊಳ್ಳುವುದಿಲ್ಲ – ಹಬ್ಬವನ್ನಾಚರಿಸುವುದಿಲ್ಲ' ಎಂದು ಪಣ ತೊಟ್ಟಿದ್ದುದು ನಿಮಗೆ ಜ್ಞಾಪಕವಿರಬಹುದು. ಆಳರಸರೊಡನೆ ಶಾಂತಿಯಿಂದ ಹೋರಾಡಿ ಇಂದು ಆ ಸ್ವಾತಂತ್ರ್ಯವನ್ನು ಜಯಿಸಿಕೊಂಡಿರುವಳು. ಇಂದು ಸಿಂಗರಿಸಿಕೊಂಡು ತ್ರಿವರ್ಣ ರಂಗಿನ ಉಡುಪುಟ್ಟು, ತುಂಬು ದೇಹ, ತುಂಬು ಮನಸ್ಸಿನಿಂದ ಹಬ್ಬವನ್ನಾಚರಿಸುತ್ತಾಳೆ. ಈ ಹಬ್ಬದಲ್ಲಿ ನೀವೆಲ್ಲರೂ ಬಾಯಿ ಸಿಹಿಮಾಡಿಕೊಂಡು ನಲ್ಲ ನಲ್ಲೆಯರೊಡನೆ ನಗೆಯಾಟವಾಡುತ್ತೀರೆಂದೂ ಆ ತಿಳಿವಿನ ನಗೆಯಾಟದಲ್ಲಿ ಕೊರವಂಜಿಯೂ ನಿಮ್ಮೊಂದಿಗಿರುತ್ತಾಳೆಂದೂ ನಂಬುತ್ತೇನೆ.

ನಿಮ್ಮಲ್ಲಿ ಗುಟ್ಟಾಗಿ ಒಂದು ವಿಷಯವನ್ನು ಹೇಳಬೇಕೆಂದಿದ್ದೇನೆ ವಿಲಾಯತಿಗೆ ಹೋದ ಕನ್ನಡಿಗರೊಬ್ಬರು ಕೇವಲ ನಾಲ್ಕು ವಾರಗಳಿದ್ದಾಗ ಈ ಸ್ವಾತಂತ್ರ್ಯ ಸಂಚಿಕೆಯ ನೆನಪನ್ನುಂಟುಮಾಡಿದರು. ಅಷ್ಟುದೂರ ಹೋಗಿ ಆ ಪಾದರಸಜೀವನದಲ್ಲಿ ಭಾಗಿಯಾಗಿದ್ದರೂ, ನಮ್ಮ ನಾಡಿನ ನಗೆಮಾಸಿಕದ ನೆನಪನ್ನಿಟ್ಟುಕೊಂಡಿರುವವರ ಮನಸ್ಸಿಗೆ ಮೋಸಮಾಡಬಾರದೆಂದು ಈ ಸಂಚಿಕೆಯನ್ನು ತರಾತುರಿಯಿಂದ ಹೊರಡಿಸಲು ಯತ್ನಿಸಿದೆ.

ಸಮರಾನಂತರ ಜೀವನ ನಡೆಸುವುದೇ ಒಂದು ಸಮರವಾಗಿದೆ. ಇಂತಹ ಸಂದರ್ಭದಲ್ಲೂ ನೆರವಾಗಿ ಸಹಾಯನೀಡಿದ ಲೇಖಕರಿಗೂ, ಜಾಹೀರಾತುದಾರರಿಗೂ, ಅಚ್ಚುಕೂಟದವರಿಗೂ, ಹಾಗೂ ದೇವರಿಗೂ, ಕೊರವಂಜಿಯು ಚಿರಋಣಿ ಆ ಋಣದ ಒಂದು ಭಾಗವನ್ನು ನಾನೂ ಹೊತ್ತಿದ್ದೇನೆ.

ಇಂದಿನಿಂದ ಭಾರತೀಯರ ಭವಿಷ್ಯವು ಭಾರತೀಯರ ಕೈಯಲ್ಲಿದೆ. ಈ ಭವಿಷ್ಯವನ್ನು ಭವ್ಯವಾಗಿ ರಚಿಸಲು ಸರ್ವಶಕ್ತನು ಮುಂದಾಳುಗಳಿಗೆ ದಾರಿ ತೋರ ಲೆಂದು ಪ್ರಾರ್ಥಿಸುತ್ತೇನೆ. ಈ ಮುಂದಾಳುಗಳಿಗೆ ತಿಳಿಬೆಳಕು ತೋರಿ, ಮನರಂ ಜನೆ ಮಾಡಲು ಕೊರವಂಜಿಯು ನೆರವಾಗುತ್ತಾಳೆಂದು ಹೇಳಬಯಸುತ್ತೇನೆ

ಅಚ್ಚೊತ್ತುವವರು, ಲೇಖಕರು ಎಣಿಸದೇ ಇದ್ದ ಹಾಸ್ಯದ ಚಟಾಕಿಗಳನ್ನು ಹಾರಿಸಿ, ನಿಮ್ಮ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಅಚ್ಚುಕೂಟದ ಮೇಲ್ವಿಚಾರಕ, ಶ್ರೀ ಗರುಡಾಚಾರ್ಯರು ಪರಮಾತ್ಮನನ್ನು ಹೊತ್ತ ಪಕ್ಷಿರಾಜನಂತೆ ಈ ಸಂಚಿಕೆಯ ಭಾರವನ್ನೆಲ್ಲಾ ಹೊತ್ತಿದ್ದಾರೆ. ಕೊರವಂಜಿಯ ವ್ಯವಸ್ಥಾಪಕರು, ಸಂಚಿಕೆಯ ವ್ಯವಸ್ಥೆಗಳನ್ನೆಲ್ಲಾ, ಬುಸುಗುಟ್ಟುತ್ತಾ ವ್ಯೈಲಿಗೆಯಾಗದಂತೆ, ಸುಬ್ಬರಾಯನ ಪ್ರಷ್ಠಿ ಆಚರಿಸಿದಂತೆ ಆಚರಿಸಿದ್ದಾರೆ ಲೇಖಕರೆಲ್ಲರೂ ನಿಮ್ಮಗಳ ಮೆಚ್ಚಿಗೆ ಅಥವಾ ಹೊಗಳಿಕೆಗೆ ಪಾತ್ರವಾದ ಲೇಖನಗಳನ್ನು ಬರೆದಿದ್ದಾರೆ.

ಸ್ವತಂತ್ರಭಾರತದಲ್ಲಿ ಕೊರವಂಜಿಯು ಎಲ್ಲ ಕನ್ನಡಿಗರನ್ನು ನಗಿಸಿ, ತನ್ನ ಜೀವನವನ್ನು ಸಾರ್ಥಕಮಾಡಿಕೊಳ್ಳಲೆಂದು ಜಗದೀಶನಲ್ಲಿ ಬೇಡುವೆನು.

ಸೆಪ್ಟೆಂಬರ್ ಸಂಚಿಕೆಯು ಆ ತಿಂಗಳ ಎಂಟನೆಯ ತಾರೀಖಿನಲ್ಲೂ, ಅಕ್ಟೋ ಬರ್ ಸಂಚಿಕೆಯು ಎಂದಿನಂತೆ ಮೊದಲ ತಾರೀಖಿಗೂ ಬರುವುದೆಂದು ತಿಳಿಸ ಬಯಸುತ್ತೇನೆ.

ಓದುಗರು ತಮಗೆ ಮೆಚ್ಚಿ ಬಂದ ಲೇಖನ, ಅಥವಾ ರಸಾಭಾಸಮಾಡಿದ ವಿಷಯವನ್ನು ತಿಳಿಸಿದರೆ ಕೊರವಂಜಿಯ ಪ್ರಗತಿಗೆ ಸಹಾಯ ಮಾಡಿದಂತಾಗುತ್ತದೆ.

ಜಾಹೀರಾತುದಾರರು ನೆರವಾದುದು ನಮ್ಮ ಸುದೈವ, ಅವರಿಗೂ ಇದರಿಂದ ಪ್ರಯೋಜನವುಂಟು ಎಂದು ಅವರಿಗೆ ತಿಳಿಸುವ ಭಾರ ನಿಮ್ಮದು. ನೀವು ವ್ಯಾಪಾರ ಮಾಡುವಾಗ ಈ ವಿಷಯವನ್ನು ಸ್ಮರಿಸಿದರೆ ನಮಗೆ ಒಳ್ಳೆಯದು.

ಚಿರಂಜೀವಿ ವ್ಯಂಗ್ಯ ಚಿತ್ರಕಾರರು ನಾನು ಕೊಟ್ಟ ಕಷ್ಟವನ್ನೆಲ್ಲಾ ಪಟ್ಟು ನೆರವಾದುದಕ್ಕೆ ನಾನು ಅವರಿಗೆ ಕೃತಜ್ಞ.

ತಾವೆಲ್ಲರೂ ಅಭಿಮಾನಿಗಳಾಗಿರುವುದಕ್ಕೆ ತಮಗೆಲ್ಲರಿಗೂ ಹೃದಯಾಂತರಾಳ ದಿಂದ ವಂದಿಸುತ್ತೇನೆ.

ನಿಮ್ಮವ

ರಾ. ಶಿ.

# ಕುಹಕಿಡಿಗಳು

---

ಪಾಕೀಸ್ಥಾನದ ರಾಜ್ಯಾಂಗ ಸಭೆಗೆ 'ಖಾಸೆಂಬ್ಲಿ' ಎಂದು ಹೆಸರಿಡುತ್ತಾರೆಂಬುದು ಸುಳ್ಳಂತೆ—

* * * *

ಅಖಿಲಭಾರತ ಧ್ವಜದಲ್ಲಿ ಚರಕಕ್ಕೆ 'ಚಕ್ರ' ಬಿದ್ದಿತಂತೆ

* * * *

ಬಾಪೂಜೀಯವರು "ನಾನು ಮಹಮ್ಮದೀಯನ ಸ್ನೇಹಿತ" ಎಂದು ಹೇಳಿದ್ದು ದಿಟ ಎಂದು ಈಗ ಹಲವು ಹಿಂದೂಗಳು ನಂಬುತ್ತಿದ್ದಾರಂತೆ—

* * * *

ಕರ್ಣಾಟಕ ಪ್ರಾಂತ್ಯವು ನಿರ್ಮಾಣವಾದರೆ–ರೆ– ತ್ರಿವರ್ಣ ಧ್ವಜದ ಮೇಲೆ ಚಕ್ರಕ್ಕೆ ಬದಲಾಗಿ ಗಂಡಭೇರುಂಡ ಹಾಕಿದರೆ; ಧ್ವಜ ಸಮಸ್ಯೆ ಹಿತವಾಗಿ ಮುಗಿದಂತೆಯೇ.

* * * *

ವೈಸರಾಯ್ ಮೌಂಟ್‌ಬಾಟನ್ನರು ಭಾರತದಲ್ಲಿ ಮಾಡಿದ ಪುಣ್ಯ ಕೆಲಸಕ್ಕಾಗಿ ಅವರ ದಶದಿನ ದಾಯಾದಿಗೆ ಬ್ರಿಟನ್ನಿನ ಭಾವೀ ರಾಣಿಯು ಪ್ರೇಮಹಸ್ತವು ದೊರಕಿತು ಎಂದು ಜ್ಯೋತಿಷ್ಯಕಾರರು ಅಂದರಂತೆ.

* * * *

ಕೆಲವು ಸಂಸ್ಥಾನಾಧೀಶರು ಕಾನ್ಸೆಂಬ್ಲಿಯಲ್ಲಿ

—ಕಮಲಪತ್ರ ನೀರಿನಲ್ಲಿದ್ದಂತೆ – ಇದ್ದಾರಂತೆ.

* * * *

ಊಟಕ್ಕೆ ಮುಂಚೆ ಔಷಧಿ ಕುಡಿಯಬೇಕೊ – ಊಟ ಆದ್ಮೇಲೋ ಎಂದು ರೋಗಿ ಕೇಳಿದನಂತೆ

—ಈಗಿನ ಕಾಲದ ಊಟ ನೋಡಿದರೆ, ಯಾವಾಗ ಬೇಕಾದರೂ ಔಷಧಿ ಕುಡಿಯಬಹುದಲ್ಲವೇ ?

* * * *

ವಿಶೇಷಸಾಹಿತ್ಯೋತ್ಸವದಲ್ಲಿ ವಿಜ್ಞಾನ ಭಾಷಣಗಳಾದರೆ—ಶೇಷಸಾಹಿತ್ಯೋತ್ಸವಗಳಲ್ಲಿ ಜ್ಞಾನಭಾಷಣಗಳಾಗುತ್ತವೆಯೇ ಎಂದು ಗಣಿತಕಾರರು ಕೇಳಿದ್ದಾರೆ—

---



ಮೈಮರೆತ ಮಾದ— ನೀರು ಸೇದುತ್ತಿರುವುದು—

—o—

"ಇಂದಿನಿಂದ ಸರ್ವರಿಗೂ ಸ್ವಾತಂತ್ರ್ಯ" (ಗಜರ, ಕೂಗು) ..... ಪಾಪ! ಬ್ಲಾಕ್ ಮಾರ್ಕೆಟ್‌ನವರಿಗೆ ಏನೂ ಹೊಸದಾಗಿ ಬಂದ ಹಾಗಾಗಲಿಲ್ಲವಲ್ಲಾ !

* * * *

"ತಾಯಿ! ನಿಮ್ಮ ಯಜಮಾನರಿಗೆ ಸಂಪೂರ್ಣ ವಿಶ್ರಾಂತಿ ಬೇಕು"
"ಅಯ್ಯೋ ಡಾಕ್ಟರೆ! ಅವರು ನನ್ನ ಮಾತು ಕಿವಿಗೆ ಹಾಕಿಕೊಳ್ಳೋದಿಲ್ಲ ....."
"ಅಷ್ಟೇ ಸಾಕು !......."

* * * *

# ಉರಿಗಾಳು

—o—

ಪಾಂಡವರು ಹನ್ನೆರಡು ವರ್ಷಗಳ ಕಾಲ ವನವಾಸಮಾಡಿದ್ದು ಹಸ್ತಿನಾಪುರದಲ್ಲಿ ಸೌದೆ ಅಭಾವ ಇದ್ದದ್ದರಿಂದ—ಎಂದು ಇಂದಿನ ಟೀಕಾಕಾರರು ಬರೆಯುತ್ತಾರೆ.

* * * *

ಸರ್ಕಾರಿ ನೌಕರರನ್ನು ಮದ್ರಾಸ್ ಪ್ರಾಂತ್ಯದಲ್ಲಿ ಇನ್ನುಮೇಲೆ 58ನೆ ವಯಸ್ಸಿಗೆ ರಿಟೈರುಮಾಡಿಸುತ್ತಾರಂತೆ.... .......ಹಾಗಾದರೆ, ಇಲ್ಲಿ ಬಂದ ಎರಡನೆಯ ವರ್ಷಕ್ಕೇನೆ ಅವರಿಗೆ ಷಷ್ಠ್ಯಪೂರ್ತಿ ಶಾಂತಿ !

* * * *

" ಮಂತ್ರಿಗಳೇ ಟಿಕೆಟ್ ಚೆಕ್‌ಮಾಡಿದರು ! " (ಸುದ್ದಿ)........ ಸರಿ ! ಆವತ್ತಿನ ಲಾಭ ಯಾರಿಗೆ ಹೋಯಿತು ?

* * * *

" ತುಪ್ಪ ಎಂದರೆ ಏನು ? ಅದರ ವಿಷಯವಾಗಿ ನಿಮಗೆ ತಿಳಿದಿದ್ದನ್ನು ಬರೆಯಿರಿ " ಎಂಬ ಪ್ರಶ್ನೆ ಮುಂದಿನ ವರ್ಷ L S ಗೆ ಬರುವುದಂತೆ........ಪರೀಕ್ಷಕರು ಅರಿಯದ ಹಸುಗೂಸುಗಳನ್ನು ಹೀಗೆ ಹಿಂಸಿಸುವುದು ತರವೆ ?

(ನಾಗೇಶರಾವ್)

* * * *

' ನಮ್ಮ ಭೋನು ಸಾಕಷ್ಟು ದೊಡ್ಡದಾಗಿದೆ ; ನಾವು ಇಲ್ಲೇ ಸ್ವತಂತ್ರರಾಗಿರುತ್ತೇವೆ ', ಎಂದು ಹಲವು ರಾಜರುಗಳು ನಿರ್ಧರಿಸಿರುವರಂತೆ.

* * * *

" ಮುಖ್ಯ ಅತಿಥಿಗಳ ಭಾಷಣವಾದ ಮೇಲೆ ಬಾಣಬಿರುಸುಗಳನ್ನು ಹಾರಿಸಲಾಯಿತು. " (ಸುದ್ದಿ)........' ಮತ್ತೊಮ್ಮೆ ' ?

* * * *

ತ್ರಿವರ್ಣ ಧ್ವಜವನ್ನು ತಲೆಬಾಗಿ ವಂದಿಸಲು ಇಂಡಿಯಾ ಸರ್ಕಾರದವರು ಇಬ್ಬರು ಆಂಗ್ಲ ಗವರ್ನರುಗಳನ್ನೂ ಒಬ್ಬರು ಗವರ್ನರ್ ಜನರಲ್‌ರವರನ್ನೂ ನೇಮಿಸಿಕೊಂಡದ್ದು ನ್ಯಾಯವಾಗಿಯೇ ಇದೆ. (ಪತ್ರಿಕೆ)....ಅದನ್ನೂ ಮಾಡಿಸಿಬಿಟ್ಟೇ ಕಳುಹಿಸೋಣ....ಈಗಲೇ ಏಕೆ ?

* * * *

———

# ಸ್ವಾತಂತ್ರ್ಯವೇಕೆ?

(ಡಿ. ವಿ. ಜಿ. ಯವರಲ್ಲಿ ಕ್ಷಮೆ ಬೇಡಿ)

ಸ್ವಾತಂತ್ರ್ಯವನು ಆಟ್ಲೆ ! ಏತಕೆಮಗಿತ್ತೆ, ಅದು ।
ಭೀತಿಯಿಂದೆಮ್ಮ ಬಾಧಿಪ ಯುಕುತಿಯಾಯ್ತ್ರ್ಯ || ಪ ||

ಚಾಣಕ್ಯ ತಾಂತ್ರಿಕನು ಚರ್ಚಿಲ್ಲನೆಮನಿದ್ದು ।
ಮೇಣವನ ಸಾಸಂಗಳೆಲ್ಲ ಬರಿದಾಯಸವೆ ? || ಅ ||

ನರ ನರೇಶ್ವರರನ್ನು ನೀವತಿಮಿತಿಯೊಳಿಟ್ಟಿರಲು ।
ನಲಿದು ನಿಮ್ಮ ಹಿರಿಮೆಯ ಪಾಡಿ ಕುಣಿದಾಡಿ ।
ನಿಮ್ಮ ನಿಂದಿಸದೆ ಮೇಣನ್ಯರನು ಲೆಕ್ಕಿಸದೆ ।
ನಿಮ್ಮ ಆಳ್ವಿಕೆಯ ಸೊಬಗ ತೋರ್ಪ ದಂಭದೊಳಿರಲು || ೧ ||

ಹ್ಯಾಟು ಬೂಟುಗಳನ್ನು, ಸೂಟು ನೆಕ್ಟೈಗಳನು ।
ನಿನ್ನಾಣತಿಯನರಿದು ಆದರಿಸುತ್ತೆ ।
ಬೇಟೆ ಜೂಜುಗಳಲ್ಲಿ, ಪಾನ ಪ್ರೇಯಸಿಯಲ್ಲಿ ।
ಸ್ವೇಚ್ಛೆಯಿಂ ನಲಿದಾಡಿ ಹರುಷದಿಂದಿರಲು || ೨ ||

ಕ್ಲಬ್ಬು ಡ್ಯಾನ್ಸ್ಹಾಲು, ರೇಸ್‌ಕೋರ್ಸು, ಕ್ರಿಕೆಟ್ ಪೋಲೊ ||
“ಎಕ್ಸ್ಕ್ಯೂಸ್ಮಿ!” “ಥ್ಯಾಂಕ್ಯೂ”, ಷೇಕ್ಹ್ಯಾಂಡುಗಳನೆಲ್ಲ ।
ಒಲವಿನಿಂ ಎಮಗರುಹಿ ನಾಗರಿಕ ಬಾಳ್ತೋರಿ ।
ಈಗೆಮ್ಮನೊಮ್ಮಿಂದೆ ಖಾದಿ, ಸಮತೆಗಳ ಬಾಯ್ದೂಡಿ || ೩ ||

—ಬೀರಣ್ಣ.

# ಎಲ್ಲಿಗೆ?

——o——

ನಾನೂ ಭಟ್ಟನೂ "ಕೋಪೀನ ಸ್ನೇಹಿತರೇ" ಆದರೂ ಈಚಿಗೆ ನಾನು ಬರೆಯುವ ವ್ಯಾಪಾರವನ್ನು ಪ್ರಾರಂಭಿಸಿದಮೇಲೆ ಭಟ್ಟ ನನ್ನನ್ನು ನಮ್ಮೂರಿನಲ್ಲಿ ಸಹ ಗಟ್ಟಿಯಾಗಿ 'ಗೊರೂರು ರಾಮಸ್ವಾಮಯ್ಯಂಗಾರ್' ಎಂದೇ ಕರೆಯುತ್ತಾನೆ. "ರಾಜಮಹಾರಾಜರ ವಂಧಿಮಾಗಧರಂತೆ ಇಷ್ಟು ಉದ್ದವಾದ ಹೆಸರಿನ ಹೊಗಳಿಕೆ ಯಾಕೆ? ಸುಮ್ಮನೆ ಹಿಂದಲಂತೆ ರಾಮ ಎಂದು ಕರೆ' ಎಂದು ಭಟ್ಟನಿಗೆ ನಾನು ಹೇಳಿದುದು ಪ್ರಯೋಜನವಾಗಲಿಲ್ಲ ಭಟ್ಟನು "ನಿನ್ನದಾದರೂ ನೀವಲ್ಲದೆ ಬೇರೆ ಯವರೇ ಉಪಯೋಗಿಸುವ ನಿನ್ನ ಪದಾರ್ಥ ಯಾವುದು ಗೊತ್ತೇ? ಅದೇ ನಿನ್ನ ಹೆಸರು; ಉಪಯೋಗಿಸಿದಷ್ಟೂ ಹೆಚ್ಚು ಹೆಚ್ಚುತ್ತಲೇ ಇರುತ್ತದೆ. ಇದನ್ನು ಕುರಿತೇ ಉಪನಿಷತ್ತಿನಲ್ಲಿ 'ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣ ಮುದುಚ್ಯತೇ | ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಿಶಿಷ್ಯತೆ – ಪೂರ್ಣ ದಿಂದ ಪೂರ್ಣವನ್ನು ಕಳೆದರೆ ಪೂರ್ಣವೇ ಉಳಿಯುತ್ತದೆ- ಎಂದಿದ್ದಾರೆ" ಎಂದ. ನಾನು 'ಹೌದು ಪೂರ್ಣಮದಃ—ನೀನು ಪೂರ್ಣ ಮತ್ತನಾಗಿರುವುದು ನಿಜ' ಎಂದೆ.

ಭಟ್ಟನು ಹೀಗೆ ಎಲ್ಲೆಲ್ಲಿಯೂ ನನ್ನನ್ನು ನನ್ನ ಪೂರ್ಣ ಹೆಸರಿನಿಂದ ಗಟ್ಟಿ ಯಾಗಿ ಕೂಗುವುದರಿಂದ ಒಂದೊಂದು ಪ್ರಯೋಜನವೂ ಆಗಿದೆ. ಬಸ್ಸಿನಲ್ಲಿ ಭರ್ತಿ ಯಾಗಿದ್ದರೂ ಭಟ್ಟ ನನ್ನ ಹೆಸರನ್ನು ಹಿಡಿದು ಗಟ್ಟಿಯಾಗಿ ಕರೆದಾಗ ಒಂದೊಂದು ಸಲ ಜಾಗ ಸಿಕ್ಕಿರುವುದುಂಟು., ರೈಲು ಗಾಡಿಯಲ್ಲಿ ಭಟ್ಟ ನನ್ನ ಹೆಸರನ್ನು ಉಚ್ಚರಿಸಿ ದಾಗ, ಗ್ರಂಥಕರ್ತರ ಬಡತನದ – ಭಂಡತನದ ಅನುಭವವುಳ್ಳ ಅಚ್ಚಿನಮನೆಯ ಮಾಲೀಕರ ಹೊರತು ಉಳಿದ ಕೆಲವರು ಗೌರವದಿಂದ ನನ್ನ ಕಡೆ ನೋಡಿದು ದುಂಟು, ಭಟ್ಟ ಮಾತ್ರ "ನಿಮಗೇನುಸ್ವಾಮಿ, ನಿಮ್ಮ ಹೆಸರೇ ಮಂತ್ರ. ನಿಮ್ಮ ಹೆಸರನ್ನು ಉಚ್ಚರಿಸಿದ ಕೂಡಲೇ ಹಾಕಿದ ಬಾಗಿಲು ತೆರೆಯುತ್ತದೆ. ಬಿದ್ದ ಘರದೆ ಏಳುತ್ತದೆ. ಹೊಡೆಯುವುದಕ್ಕೆ ಎದ್ದ ಕೈ ಸಲಾಮು ಮಾಡುತ್ತದೆ" ಎನ್ನು ತ್ತಾನೆ. ನನಗೂ ಒಂದೊಂದು ಸಲ ಭಟ್ಟನ ಮಾತು ನಿಜವಿದ್ದರೂ ಇರಬಹು ದೇನೊ ಎನ್ನಿಸುತ್ತದೆ. ಆಗ ನನ್ನ ತಲೆಯಮೇಲಿನ ಜವಾಬ್ದಾರಿಯಿಂದ ನನಗೆ ಭಯವಾಗಿ ನಾನು ಎಚ್ಚರಿಕೆಯಿಂದ ನಡೆದುಕೊಳ್ಳುತ್ತೇನೆ.

ಆ ದಿವಸ ನಾನು ಹಾಸನ ಸ್ಟೇಶನ್ನಿನಿಂದ ಮೈಸೂರಿಗೆ ಹೊರಟಾಗ ಭಟ್ಟನೂ ರೈಲ್ವೆ ಸ್ಟೇಶನ್ನಿಗೆ ನನ್ನನ್ನು ಕಳುಹಿಸಲು ಬಂದಿದ್ದ. ನನ್ನ ಜತೆಯಲ್ಲಿರುವಾಗ

ಭಟ್ಟ, ಸಾಧಾರಣವಾಗಿ ಗಟ್ಟಿಯಾಗಿಯೇ ಕೂಗಿ ಮಾತನಾಡುತ್ತಿರುತ್ತಾನೆ. ಜನರ ದೃಷ್ಟಿ ನಮ್ಮ ಕಡೆಗೆ ಬೀಳಲಿ ಎಂದಿರಬಹುದು. ಹಾಸನದ ಸ್ಟೇಶನ್ನಿನಲ್ಲಿ ಟಿಕೆಟ್ ತೆಗೆದುಕೊಳ್ಳಲು ಕ್ಯೂನಲ್ಲಿ ಬಹಳ ಜನ ನಿಂತಿದ್ದರು. ನಾನೂ ಗುಂಪಿನ ಹಿಂದೆ ಅರವತ್ತನೆಯವನೋ ಎಪ್ಪತ್ತನೆಯವನೋ ಆಗಿ ನಿಂತಿದ್ದೆ. ಜನ ನಿಧಾನವಾಗಿ ಮುಂದಕ್ಕೆ ಸರಿಯುತ್ತಿದ್ದರು ನಿಂತು ನಿಂತು ನನಗೆ ಬೇಸರಿಕೆ ಆಯಿತು. ನಾನು ಭಟ್ಟನಿಗೆ "ಇನ್ನೂ ಒಂದು ಗಂಟೇ ಬೇಕು, ಟಿಕೆಟ್ ಸಿಕ್ಕಲು" ಎಂದೆ. ಭಟ್ಟನು "ನಿಮಗ್ಯಾಕೆ ಸ್ವಾಮಿ ಈ ಕ್ಯೂನಲ್ಲಿ ಫಜೀತಿ? ನಿಮ್ಮ ಹೆಸರು ಹೇಳಿದರೆ ಆಕಡೆ ಯಿಂದಲೇ ಹೋಗಿ ತೆಗೆದುಕೊಳ್ಳಬಹುದು" ಎಂದ. ನಾನು "ಆ ಕಡೆ ಪ್ರವೇಶ ವಿಲ್ಲ ಎಂದು ಬರೆದಿದೆ" ಎಂದೆ ಭಟ್ಟನು ಅದೆಲ್ಲಾ ನಮಗೆ'' ಎಂದು ನಕ್ಕ.

ಆ ಘಳಿಗೆಯಲ್ಲಿ ನನಗೆ "ಇದ್ದರೂ ಇರಬಹುದು ನನ್ನ ಹೆಸರಿಗೆ ಸ್ವಲ್ಪ ಮಹಿಮೆ" ಎನ್ನಿಸಿತು ನಮ್ಮ ದೇಹವನ್ನು ಕಲಿ ಪ್ರವೇಶಿಸಬೇಕಾದರೆ ನಾವು ಅಶುದ್ಧರಾಗಿರುವ ಕಾಲದಲ್ಲಿ ಪ್ರವೇಶಿಸುತ್ತಾನಂತೆ. ಅಹಂಕಾರವೇ ಅಶುದ್ಧಿ. ಆ ಗಳಿಗೆಯಲ್ಲಿ ಕಲಿ ನನ್ನಲ್ಲಿ ಪ್ರವೇಶಿಸಿದನು.

ನನ್ನ ಹಿಂದೆ ನಿಂತಿದ್ದ ಪ್ರಯಾಣಿಕರೊಬ್ಬರು "ಸ್ವಾಮಿ ನೀವು ಎಲ್ಲಿಗೆ?" ಎಂದರು. ಯಾರಾದರೂ ನೀವು ಎಲ್ಲಿಗೆ ಎಂದು ಕೇಳಿದರೆ ಅಪಶಕುನವೆಂದು ನಮ್ಮ ಪೂರ್ವೀಕರು ಹೇಳುತ್ತಿದ್ದರು. ನಮ್ಮ ಊರು ಸಾಹುಕಾರರು 'ಎಲ್ಲಿಗೆ' ಎಂದು ಯಾರಾದರೂ ಕೇಳಿದರೆ ಹೇಳುತ್ತಿರಲಿಲ್ಲ. ಹಾಸನದ ಕಡೆ ಹೊರಟಿದ್ದರೆ "ನರಸೀಪುರಕ್ಕೆ" ಎನ್ನುತ್ತಿದ್ದರು. "ಯಾವ ಹುತ್ತದಲ್ಲಿ ಯಾವ ಹಾವು ಇದೆಯೋ, ನಮ್ಮ ಎಚ್ಚರಿಕೆ ನಮ್ಮ ಕೈಯಲ್ಲಿರಬೇಕು' ಎನ್ನುತ್ತಿದ್ದರು. ಆದರೆ ಆಧುನಿಕರಾದ ನಾವು ಇರುವುದನ್ನು ಇರುವಂತೆ ಹೇಳಿಬಿಡುತ್ತೇವೆ. ಯಾರಾದರೂ "ನೀವು ಎಲ್ಲಿಗೆ ಹೊರಟಿರಿ" ಎಂದ ಕೂಡಲೆ ಪೆಚ್ಚರಾಗಿ ಸತ್ಯ ಹೇಳಿಬಿಡಬೇಡಿ 'ಸತ್ಯಕ್ಕೆ ಚಿತ್ತಲೆ' ಎಂಬ ಗಾದೆ ನಿಮಗೆ ಜ್ಞಾಪಕವಿರಲಿ. ಅವಧರಿಸಿ.

ನನ್ನ ಹಿಂದೆ ನಿಂತಿದ್ದವರು ಮತ್ತೆ "ಸ್ವಾಮಿ? ನೀವು ಎಲ್ಲಿಗೆ?" ಎಂದರು. "ಮೈಸೂರಿಗೆ" ಎಂದೆ. ಕೂಡಲೇ ಅವರ ಮುಖದಲ್ಲಿ ನಗುವೂ ನನ್ನನ್ನು ಕುರಿತ ಪ್ರಸನ್ನಮುಖಭಾವವೂ ಉಂಟಾಯಿತು. ನಾನು ಏನೊಂದನ್ನೂ ಯೋಚಿಸು ವುದಕ್ಕೆ ಮುಂಚೆಯೇ ಅವರು ನನ್ನ ಎರಡು ಬೆರಳುಗಳ ಸಂದಿನಲ್ಲಿ ನಾನು ಹಿಡಿದಿದ್ದ ಐದು ರೂಪಾಯಿ ನೋಟನ್ನು ಸರಕ್ಕನೆ ತೆಗೆದುಕೊಂಡು ಬಿಟ್ಟರು "ಟಿಕೇಟ್ ತರುತ್ತೇನೆ, ನನಗೂ ಮೈಸೂರಿಗೆ" ಎಂದರು. ಭಟ್ಟ ನನಗೆ "ಬನ್ನಿ ಸ್ವಾಮಿ ದೀಪ ಎಲ್ಲಿದ್ದರೂ ಪ್ರಕಾಶವೆ" ಎಂದು ಹೇಳಿ ಅಲ್ಲೇ ಇದ್ದ ಬೆಂಚಿನ ಮೇಲೆ ನನ್ನ ಮಗ್ಗುಲಲ್ಲಿ ಕುಳಿತನು.

ಕ್ಯೂ ಕ್ರಮವನ್ನು ಕಂಡುಹಿಡಿದ ಮಹರಾಯ ಬಲು ಬುದ್ಧಿವಂತ. ಇಲ್ಲದಿದ್ದರೆ ನುಗ್ಗಾಟ ತಿಕ್ಕಾಟದಲ್ಲಿ ಜನಕ್ಕೆ ನಿತ್ಯ ಎಷ್ಟು 'ಜಖಂ' ಆಗುತ್ತಿತ್ತೊ ! ಆದರೆ ಈ ಕ್ಯೂವನ್ನು ಕಂಡುಹಿಡಿದವನು, ಒಳಗಿರುವವನು ಸರಸರನೆ ಟಿಕೆಟ್ ಕೊಡಬೇಕು ಎಂಬುದನ್ನು ಮಾತ್ರ ಹೇಳಲಿಲ್ಲ. ಒಂದು ಪಕ್ಷದವರ–ಅಂದರೆ ಜನರ ನಡತೆಯಲ್ಲಿ ಆಗಬೇಕಾದ ಬದಲಾವಣೆಯನ್ನು ಹೇಳಿದನೇ ಹೊರತು ಮತ್ತೊಂದು ಪಕ್ಷದವರ ಅಂದರೆ ಟಿಕೆಟ್ ಕೊಡುವವರ ಪಕ್ಷದಲ್ಲಿ ಆಗಬೇಕಾದ ಬದಲಾವಣೆ ಹೇಳಲಿಲ್ಲ. ಅಂತು ಅರ್ಧಗಂಟೆಯ ಹೊತ್ತಿನಲ್ಲಿ ನನ್ನ ರೂಪಾಯಿಗಳನ್ನೂ ತೆಗೆದುಕೊಂಡು, ಟಿಕೆಟ್ಟಿಗಾಗಿ ಹೋಗಿದ್ದವರು ಬಂದರು ಟಿಕೆಟ್ಟನ್ನೂ ಚಿಲ್ಲರೆಯನ್ನೂ ಜೋಬಿಗೆ ಹಾಕಿಕೊಂಡು "ಬಂದೆ" ಎಂದು ಹೇಳಿ ಹೊರಟುಹೋದರು. ನಾನು "ನನ್ನ ಟಿಕೆಟ್ ಚಿಲ್ಲರೆ ನನ್ನ ಕೈಲಿ ಕೊಟ್ಟು ಹೋಗಬಹುದಾಗಿತ್ತು" ಎಂದೆ. ಭಟ್ಟನು '! ನಿಮಗೆ ಯಾಕೆ ಯೋಚನೆ ? ಕುಡಿದ ನೀರು ಅಲ್ಲಾಡದಂತೆ ನಿಮ್ಮನ್ನು ಮೈಸೂರಿಗೆ ಕರೆದುಕೊಂಡು ಹೋಗಿ ಬಿಡುತ್ತಾನೆ' ಎಂದ.

ಇನ್ನೇನು ರೈಲು ಬರುವ ಹೊತ್ತಾಯಿತು. ನನ್ನ ಟಿಕೆಟ್ ತೆಗೆದುಕೊಂಡಿದ್ದವರು ಲಗ್ಗೇಜ್ ತಕ್ಕಡಿಯಮೇಲೆ ಎರಡು ಗಂಟುಗಳನ್ನಿಟ್ಟು ತೂಕಮಾಡಿಸುತ್ತಿದ್ದರು. ತೂಕವಾದ ನಂತರ ರೈಲ್ವೆ ಆಳು ಗಂಟುಗಳನ್ನು ತಕ್ಕಡಿಯಿಂದ ಕೆಳಕ್ಕೆ ತಳ್ಳಿದ. ಭಟ್ಟ "ಹಾಗಾದಮೇಲೆ ಹೋಗಿ ಬನ್ನಿ" ಎಂದು ಹೇಳಿ ಎದ್ದ. ನನ್ನ ಟಿಕೆಟ್ ನನ್ನ ಸ್ನೇಹಿತರ ಕೈಯಲ್ಲಿಯೇ ಇತ್ತು. ಬಾಗಿಲಿನಲ್ಲಿ ಟಿಕೆಟ್ ಪರೀಕ್ಷಿಸುತ್ತಾ ನಿಂತಿದ್ದ ಗುಮಾಸ್ತರು "ಆ ಎರಡು ಗಂಟು ಯಾರವು ?" ಎಂದರು ನನ್ನ ಸ್ನೇಹಿತರು ತಮ್ಮ ಜೇಬಿನಿಂದ ಎರಡು ಮೈಸೂರು ಟಿಕೆಟ್‌ಗಳನ್ನೂ ಅವೆರಡಕ್ಕೂ ಸಂಬಂಧಿಸಿದಂತಿದ್ದ ಎರಡು ಪಾಸ್‌ಗಳನ್ನು ತೋರಿಸಿದರು. ಟಿಕೆಟ್ ಕಲೆಕ್ಟರು "ಆ ಟಿಕೇಟು ಯಾರದು ?"' ಎಂದು ಕೇಳಿದ. ನನ್ನ ಮಿತ್ರರು "ಇವರೇ, ನಮ್ಮವರೇ" ಎಂದರು. ಹಾಗಾದರೆ ಅವರ ಟಿಕೆಟ್ ಅವರ ಕೈಲಿ ಕೊಡಿ" ಎಂದ. ಅನಂತರ ತಪ್ಪಿತಸ್ಥ ಸಿಕ್ಕಿದಾಗ ರೈಲ್ವೆಯವರೂ ಪೋಲೀಸಿನವರೂ ಅವಲಂಬಿಸುವ ದುರಾಸೆಯ ಮುಖಭಾವದಿಂದ "ಅವರ ಟಿಕೇಟಿನಲ್ಲಿ ನಿಮ್ಮ ಲಗೇಜನ್ನು ಸಾಗಿಸುತ್ತೀರೋ ?" ಎಂದ. ನನಗೆ "ಒಳ್ಳೆಯ ಪೀಕಲಾಟಕ್ಕೆ ಬಂತಲ್ಲ" ಎಂಬ ಭಯವಾಯಿತು. ಏನು ಜವಾಬ್ ಕೊಡಲಿ ಎಂದು ನಾನು ಯೋಚಿಸುತ್ತಿರುವಾಗ ನಮ್ಮ ಸ್ನೇಹಿತರು "ಇಲ್ಲ ಸಾರ್, ಸಾಮಾನೂ ಅವರದೇ" ಎಂದರು ಟಿಕೆಟ್ ಕಲೆಕ್ಟರರು "ಹಾಗಾದರೆ ಅವರ ಸಾಮಾನು ಅವರು ತೆಗೆದುಕೊಂಡು ಹೋಗಲಿ. ಅವರ ಕೈಲಿ ಕೊಡಿ" ಎಂದ. ನನಗೆ ನನ್ನ 'ಸ್ನೇಹಿತ'ರ ಮೇಲೆ ಅಸಾಧ್ಯ ಕೋಪವುಂಟಾಯಿತು. ಅವರು ಮಾತ್ರ ಸ್ವಲ್ಪ ವಿನಯದ ಮುಖಭಾವವನ್ನು ಮಾಡಿಕೊಂಡು "ಸಾರ್ ಒಂದು ಗಳಿಗೆ ತೆಗೆದುಕೊಳ್ಳಿ" ಎಂದರು. ಒಂದು

ಗಂಟನ್ನು ನನ್ನ ಹೆಗಲಿನಮೇಲೆ ಹೊರಿಸಿಯೇ ಬಿಟ್ಟರು. ಟಿಕೆಟ್ ಕಲೆಕ್ಟರರಿಗೂ ಸ್ವಲ್ಪ "ಕಾಫಿ ಖರ್ಚು" ದೊರೆತಿದ್ದಿರಬೇಕು.

ನಾನು ಸಾಧಾರಣವಾಗಿ ಪ್ರಯಾಣ ಕಾಲದಲ್ಲಿ ಯಾವ ಗಂಟನ್ನೂ ಹೆಚ್ಚಾಗಿ ತೆಗೆದುಕೊಂಡು ಹೋಗುವುದಿಲ್ಲ. "ಹಗುರವಾಗಿ ಪ್ರಯಾಣ" ಮಾಡುವುದು ನನ್ನ ಸ್ವಭಾವ. ಒಂದು ಕೈ ಚೀಲದಲ್ಲಿ ಒಂದು ಪಂಚೆ, ದುಪಟಿ, ಇವೇ ನನ್ನ "ಮಸ್ಟ್‌ಕಿಟ್", (must kit) ಯಾಕೆಂದರೆ ಹೋಲ್ಡ್ ಆಲ್‌ನಲ್ಲಿ ಒಂದು ಗಾಡಿ ಹಿಡಿಯುವಷ್ಟು ಸಾಮಾನನ್ನು ಹಾಕಿಕೊಂಡು ಊರಿನಿಂದ ಊರಿಗೆ ಹೊರಟರೆ ರೈಲುಛಾರ್ಜಿಗಿಂತ ಜಟಕಾ ಕೂಲಿಗಳ ಬಾಡಿಗೆ ಅಧಿಕವಾಗುತ್ತದೆ. ಆಂಜನೇಯ ಬೆಟ್ಟವನ್ನ ಹೊತ್ತಂತೆ, ತನಗಿಂತ ನಾಲ್ಕರಷ್ಟು ಭಾರವಾದ ಹಾಸಿಗೆ ಹೊತ್ತು ಕೊಂಡು ಏದುತ್ತಾ ರೈಲ್ ಕಿಟಕಿಯಲ್ಲಿ ಆ ಹಾಸಿಗೆ ತೂರಿಸುವವರನ್ನು ನೋಡಿ ನನಗೆ ಕನಿಕರವುಂಟಾಗಿದೆ. ಒಂದೇ ಕೈನಲ್ಲಿ ಹಗುರವಾಗಿ ನನ್ನ ಗಂಟನ್ನು ಹಿಡಿದು ಕೊಂಡು ಸಿಪಾಯಿಯ ಹಾಗೆ ಸರ್ರನೆ ರೈಲಿಗೆ—ರೈಲಿನಿಂದ ಇಳಿದು-ಹೋಗುವುದು ನನ್ನ ಪದ್ಧತಿ. ಭಾರದ ಭಯಕ್ಕೆ ಒಂದು ಟವಲನ್ನು ಸಹ ಹೆಚ್ಚಾಗಿ ತೆಗೆದು ಕೊಳ್ಳದ ನಾನು ಏದುಸಿರು ಬಿಡುತ್ತಾ ನನ್ನ ಮಿತ್ರರ ಗಂಟನ್ನು ಹೊತ್ತುಕೊಂಡೆ. ಹಿಂದಿರುಗಿ ನೋಡಿದಾಗ ಭಟ್ಟ ಇನ್ನೂ ಅಲ್ಲಿಯೇ ನಿಂತಿದ್ದ. ನನ್ನ ಮಹಿಮೆ ಯನ್ನು ಕೊಂಡಾಡುವ ಅವನಿಗೆ ಸಹ "ಅಷ್ಟಲ್ಲದೆ ಇವರಿಗೆ ಅವರು ಸುಮ್ಮನೆ ಟಿಕೆಟ್ ತಂದುಕೊಡುತ್ತಾರೆಯೆ ?" ಎಂದು ತೋರಿರಬೇಕು. ನನಗೆ ಅವನ ಮುಖದಲ್ಲಿ ಕನಿಕರಕ್ಕಿಂತ ಚೇಷ್ಟೆಯೇ ಹೆಚ್ಚಾಗಿ ತೋರಿತು.

ನನ್ನ ಸ್ನೇಹಿತರು ಗಾಡಿಯೊಳಕ್ಕೆ ಹೋಗಿ ಮೊದಲು ತಮ್ಮ ಗಂಟನ್ನು ಮೇಲೆ ಇಟ್ಟು, ಕಿಟಕಿಯಿಂದ ನನ್ನದನ್ನು ತೆಗೆದುಕೊಂಡರು ನನ್ನ ತಲೆಯ ಮೇಲಿದ್ದ ಆ ಉದ್ದವಾದ ಗಂಟನ್ನು ಕಿಟಿಕಿ ಮೂಲಕ ಎಳೆದುಕೊಳ್ಳುವಾಗ ಕಿಟ ಕಿಯ ಬಳಿ ಕುಳಿತಿದ್ದವರೊಬ್ಬರಿಗೆ ಅದು ತಗಲಿತು. ಅವರು ನನ್ನನ್ನೇ ನುಂಗು ವಂತೆ ನೋಡುತ್ತಾ "ಗುಡ್ಸ್‌ಗಾಡಿಗೆ ಯಾಕೆ ಹಾಕಬಾರದು ? ಎಲ್ಲಿ ನೋಡಿದರೂ ಈ 'ಬ್ಲಾಕ್‌ಮಾರ್ಕೆಟ್'ನವರ ಕಾಟ" ಎಂದರು. ನನಗೆ ಮತ್ತೆ ನನ್ನ 'ಮಿತ್ರರ' ಮೇಲೆಯೇ ಕೋಪವುಂಟಾಯಿತು. ಆದರೆ ಅವರು ಪ್ರಸನ್ನರಾಗಿ ನನ್ನ ಚಿಲ್ಲರೆ ನನಗೆ ಕೊಟ್ಟು "ನೋಡಿಸಾರ್ ನಿಮ್ಮ ಟಿಕೆಟ್‌ನಲ್ಲಿ ಮಾಡಿಸಿದುದರಿಂದ ನನಗೆ ಹದಿಮೂರಾಣೆ ಉಳಿಯಿತು. ಲಗೇಜ್ ಛಾರ್ಜು ಬಹಳ ದುಬಾರಿ ಸಾರ್. ಏನೋ ನೀವು ಪರಿಚಿತರಲ್ಲದಿದ್ದರೂ ದಯವಿಟ್ಟುದರಿಂದ ಸರಿಯಾಯಿತು ಇಲ್ಲ ದಿದ್ದರೆ ಇನ್ನೂ ಒಂದು ರೂಪಾಯಿ ಲಗ್ಗೇಜ್‌ಗೆ ಕಕ್ಕಬೇಕಾಗಿತ್ತು..... .. ಸರಿಯಾಗಿ ವಿಶಾಲವಾಗಿ ಕೂತ್ಕೋಳಿ ಸಾರ್' ಎಂದರು. "ಇನ್ನು ಮೈಸೂರಿಗೆ ಹೋಗುವ ವರೆಗೆ ಇವರ ಹತ್ತಿರ ಮಾತು ಬೇಡ" ಎಂದು ನಾನು ಕಣ್ಣುಮುಚ್ಚಿಕೊಂಡು

ಕುಳಿತೆ. ಪ್ರಯಾಣಿಕರಲ್ಲಿ ಒಬ್ಬಿಬ್ಬರು ನನ್ನನ್ನು "ಆ ಗಂಟಿನಲ್ಲಿರುವುದೇನು?" ಎಂದರು. ನಾನು ಪ್ರತ್ಯುತ್ತರ ಕೊಡದೆ ಸುಮ್ಮನೆಯೇ ಕುಳಿತಿದ್ದೆ.

ರಾತ್ರಿ ಎಂಟುವರೆ ಗಂಟೆಗೆ ರೈಲು ಕೃಷ್ಣರಾಜ ನಗರ ಸ್ಟೇಷನ್ನಿಗೆ ಬಂದಿತು. ಮೈಸೂರು ಗಡಿಗೆ ಬಂದ ಕೂಡಲೇ 'ಬ್ಲಾಕ್‌ಮಾರ್ಕೆಟ್'ನವರ ಎದೆ ನಡುಗುತ್ತೆ ಎಂದು ಜನ ಹೇಳುತ್ತಾರೆ. ಕೃಷ್ಣರಾಜ ನಗರದಲ್ಲಿ ನಮ್ಮ ಗಾಡಿಯೊಳಕ್ಕೆ ಒಬ್ಬ ಪೋಲೀಸಿನವನು ಬಂದ. ಮೇಲೆ ಇದ್ದ ಗಂಟುಗಳನ್ನೆಲ್ಲಾ ನೋಡಿದ. ನಮ್ಮ ಸ್ನೇಹಿತರು ಇಟ್ಟಿದ್ದ ಗಂಟನ್ನು ನೋಡಿ "ಇದು ಯಾರದು?" ಎಂದ. ಅವರು "ನನ್ನದು" ಎಂದರು. ಅನಂತರ ನಮ್ಮ ಸ್ನೇಹಿತರು ಇಡಿಸಿದ್ದ ನನ್ನ ಗಂಟನ್ನು ನೋಡಿ "ಇದು ಯಾರದು?" ಎಂದ. ನಾನು ಕಣ್ಣುಮುಚ್ಚಿಕೊಂಡು ಸುಮ್ಮನೆಯೇ ಕುಳಿತಿದ್ದೆ. ನಮ್ಮ ಸ್ನೇಹಿತರು ಒಂದೆರಡು ಸಲ ನನ್ನನ್ನು ತಿವಿದರು. ನಾನು "ಗಂಟು ನನ್ನದು" ಎಂದೆ. ಆತ 'ಅದರಲ್ಲಿರುವುದೇನು?' ಎಂದ ನನಗೆ ಕೋಪ ಬಂತು "ಗಂಟು ನನ್ನದಲ್ಲ; ಬೇಕಾದ್ದು ಮಾಡಿಕೊಳ್ಳಿ" ಎಂದು ಹೇಳಬಿಡಬೇಕೆಂದು ಹೊರಟೆ. ಈ 'ಕಿರುಕುಳವೆಲ್ಲಾ ನನಗೆ ಯಾಕೆ? ಅವರ ಪಾಡು.' ಎಂದು ನಾನು ಬಾಯಿ ತೆಗೆಯುವುದರಲ್ಲಿ ನನ್ನ ಸ್ನೇಹಿತರು "ಏನೂ ಇಲ್ಲ ಸಾರ್ ಸಂಸಾರದ ಉಪಯೋಗಕ್ಕೆ ಬಟ್ಟೆ" ಎಂದರು. ಪೋಲೀಸಿನವನು ಅವರ ಕಡೆ ದುರದುರನೆ ನೋಡುತ್ತಾ "ನಿಮಗೇನು ಸುಮ್ಮನಿರಿ. ಅವರು ಹೇಳುತ್ತಾರೆ" ಎಂದ. ಅನಂತರ ಸ್ವಲ್ಪ ಜೋರಾಗಿಯೇ ನನ್ನನ್ನು "ಅದರಲ್ಲಿರುವುದೇನು?" ಎಂದು ಗದರಿಸಿದ. ನಾನು ಜವಾಬುಕೊಡುವುದಕ್ಕೆ ಮುಂಚಿತವಾಗಿ "ನೀವು ಇಳೀರಿ. ನನಗೆ ಅನುಮಾನವಾಗಿದೆ. ಪೋಲೀಸ್ ಸ್ಟೇಷನ್ನಿಗೆ ಹೋಗಬೇಕು' ಎಂದ. ಗಂಟು ನನ್ನದಲ್ಲ ಎಂಬುದರ ಹೊರತು ಉಳಿದ ಅನೇಕ ವಾದಗಳನ್ನು ನಾನು ಮಾಡಿದೆ. ಏನೂ ಪ್ರಯೋಜನವಾಗಲಿಲ್ಲ. ಪೋಲೀಸಿನವನು ನನ್ನ ಟಿಕೆಟ್ಟನ್ನೂ ಗಂಟನ್ನೂ ತೆಗೆದುಕೊಂಡ ನನ್ನ ಸ್ನೇಹಿತರು 'ಬಟ್ಟೆ ಸ್ವಂತ ಉಪಯೋಗಕ್ಕೆ' ಎಂದು ಹೇಳಿ ಸಾರ್. ಬೆಳಗಿನ ರೈಲಿನಲ್ಲಿ ಬಂದು ಬಿಡಿ. ನಿಮ್ಮನ್ನೇ ಕಾಯ್ದುಕೊಂಡು ನಂಜರಾಜ ಬಹದ್ದೂರ್ ಛತ್ರದಲ್ಲಿರುತ್ತೇನೆ" ಎಂದ. ನನಗೆ ಅವನನ್ನು ಕೊಲ್ಲುವಷ್ಟು ಕೋಪ ಬಂದಿದ್ದುದರಿಂದ ನಾನು ಏನು ಮಾತನಾಡಲಿಲ್ಲ. ರೈಲು ಹೊರಟೇ ಹೋಯಿತು.

ಆ ರಾತ್ರಿ ನಾನು ಪೋಲಿಸ್ ಸ್ಟೇಷನ್ನಿನಲ್ಲಿ ಸೊಳ್ಳೆಗಳ ಕೈಯಲ್ಲಿ ಮೈ ಅಗಿಸಿಕೊಂಡೆ. ಪೋಲಿಸ್ ಇನಿಸ್ಪೆಕ್ಟರು ಮರುದಿನ ಬೆಳಿಗ್ಗೆ ಖೂನಿ ಮೊಕದ್ದಮೆಯ ತನಿಕೆಗೆ ಬೇರೆ ಊರಿಗೆ ಹೋದುದರಿಂದ ರಾತ್ರಿಯವರೆಗೆ ಬರಲಿಲ್ಲ. ಉಳಿದ ಪೋಲೀಸಿನವರು ನನ್ನ ವಂಶ ಕುಲ ಗೋತ್ರ ಪೂರ್ವಾಪರಗಳನ್ನೆಲ್ಲಾ ಕೇಳಿ ತಿಳಿದುಕೊಂಡರು. ಬಟ್ಟೆಯ ಗಂಟನ್ನು ಬಿಚ್ಚಿದಾಗ ಅದರಲ್ಲಿ ಬ್ಲಾಕ್‌ಮಾರ್ಕೆಟ್ಟಿನ ಪದಾರ್ಥಗಳಾವುವೂ ಇರಲಿಲ್ಲ. ಆ ರಾತ್ರಿ ಪೋಲೀಸ್ ಇನ್‌ಸ್ಪೆಕ್ಟರು ಬಂದರು. ನನಗೆ

ಒಂದು ದಿನದಿಂದ ಆದ ಕಷ್ಟಕ್ಕೆ ಮರುಗಿದರು. ನನ್ನನ್ನು ಯಾಕೆ ರೈಲಿನಿಂದ ಇಳಿಸಿದರು ಎಂಬುದು ಅವರಿಗೂ ಗೊತ್ತಾಗಲಿಲ್ಲ. ಪೋಲೀಸ್ ಕಾನಿಸ್ಟಬಿಲ್ "ಇವರ ನಡತೆ ಸಂಶಯಾಸ್ಪದವಾಗಿತ್ತು" ಎಂದ. ಹಾಸನ ಸ್ಟೇಷನ್‌ನಲ್ಲಿ ನಾನು ಗಂಟು ನನ್ನದಲ್ಲ ಎಂದು ಹೇಳದಿದ್ದುದರಿಂದ ಹಿಡಿದು ನನ್ನ ನಡತೆ ಸಂಶಯಾತ್ಮಕ ಎಂಬುದು ನನಗೇ ತೋರಿತು. ಯಾವದೋ ರೂಪದಲ್ಲಿ ಮಾಡಿದ ತಪ್ಪಿಗೆ ಯಾವ ರೂಪದಲ್ಲಿಯೋ ಶಿಕ್ಷೆಯಂತೂ ಆಗುತ್ತೆ ಎಂದುಕೊಂಡೆ.

ಮರುದಿನ ರಾತ್ರಿ ರೈಲು ಹತ್ತಿ ಮೈಸೂರು ಕಡೆಗೆ, ಗಂಟಿನೊಂದಿಗೆ ಹೋಗುತ್ತಿರುವಾಗ ಸಾಗರಕಟ್ಟೆ ಸೇತುವೆಯ ಕೆಳಕ್ಕೆ ಆ ಗಂಟನ್ನು ಎಸೆದುಬಿಡಬೇಕೆಂಬ ಆಸೆಯನ್ನು ಅದುಮುವುದು ಬಹಳ ಕಷ್ಟವಾಯಿತು. ಗಾಡಿಯಲ್ಲಿ ನಾನು ಒಬ್ಬನೇ ಇದ್ದಿದ್ದರೆ ಹಾಗೆಯೇ ಮಾಡುತ್ತಿದ್ದೆ. ಇತರ ಪ್ರಯಾಣಿಕರ ಭಯದಿಂದ ನನ್ನ ಆಸೆಯನ್ನು ಇಂಗಿಸಿಕೊಂಡೆ. ಮೈಸೂರು ಸ್ಟೇಷನ್‌ನಲ್ಲಿ ಇಳಿದನಂತರ, ಭಾರದ ಭಯಕ್ಕೆ ಒಂದು ಪಂಚೆಯನ್ನು ಸಹ ಪ್ರಯಾಣಕಾಲದಲ್ಲಿ ಹೆಚ್ಚಾಗಿ ತೆಗೆದುಕೊಳ್ಳದ ನಾನು ಒಂದು ಜಟಕಾದಲ್ಲಿ ನಂಜರಾಜ ಬಹದ್ದೂರ್ ಛತ್ರಕ್ಕೆ ಹೋದೆ. ಅಲ್ಲಿ ನನ್ನ "ಸ್ನೇಹಿತರು" ನನ್ನನ್ನೇ ಕಾಯುತ್ತಾ ಕುಳಿತಿದ್ದರು. ನನ್ನನ್ನು ನೋಡಿದ ಕೂಡಲೆ 'ಏನುಸಾರ್' ಬೆಳಗಿನ ಬಸ್‌ನಲ್ಲಿ ಹುಣಸೂರಿಗೆ ಹೋಗಬೇಕಾಗಿತ್ತು, ನೀವು ಬರಲಿಲ್ಲ. ಒಂದುದಿನ ಅನ್ಯಾಯವಾಗಿ ನಿಂತುಬಿಟ್ಟೆ" ಎಂದರು. ಆಗ ಏನಾದರೂ ಸಾಗರ ಕಟ್ಟೆ ಎದುರಾಗಿ ಸಿಕ್ಕಿದ್ದರೆ ನಾನು ಖಂಡಿತವಾಗಿ ಗಂಟನ್ನು ಅದರೊಳಕ್ಕೆ ಎಸೆದು ಬಿಡುತ್ತಿದ್ದೆ. ನಾನು ಆ "ಸ್ನೇಹಿತ"ರೊಂದಿಗೆ ಮಾತನಾಡಲಿಲ್ಲ. ಮಾತನ್ನು ಪ್ರಾರಂಭಿಸಿದರೆ ಮಾತು ಹಿಡಿತದಲ್ಲಿರುವದಿಲ್ಲವೆಂದು ನನಗೆ ಗೊತ್ತು ; ಈ ಪಿಶಾಚಿ ತನಗೆ ಒಂದುದಿನ ಸಾವಕಾಶವಾದುದನ್ನು ಯೋಚಿಸುತ್ತಿದ್ದಾನೆಯೇ ಹೊರತು ನನಗೂ ಒಂದು ದಿನ ಸಾವಕಾಶವಾಗಿ ನನ್ನ ಕೆಲಸಗಳೆಲ್ಲಾ ಕೆಟ್ಟದು ಇವನ ಗಮನಕ್ಕೆ ಬರಲಿಲ್ಲವಲ್ಲಾ ಎಂದುಕೊಂಡೆ. ನಾನು ಗಂಟನ್ನು ಅವನ ಮುಂದೆ ಎಸೆದು ಹೊರಟಕೂಡಲೇ ಆತ "ಮುಂದೆ ನೀವು ಎಲ್ಲಿಗೆ ?" ಎಂದ. ಹಿಂದೆ ಅವನು ಎಲ್ಲಿಗೆ ಎಂದಾಗ ಅವನ ಪ್ರಶ್ನೆಗೆ ಪ್ರತ್ಯುತ್ತರವನ್ನು ಕೊಡುವ ಸೌಜನ್ಯವನ್ನು ತೋರಿಸಿದುದರಿಂದಲೇ ನನಗೆ ಈ ಗತಿಯುಂಟಾಗಿತ್ತು. ನಾನು 'ಎಲ್ಲಿಗಾದರೆ ನಿಮಗೇನು ? ಯಮಪುರಿಗೆ' ಎಂದು ಹೇಳಿ ಒಂದು ಗಳಿಗೆಯೂ ಆ ಜಾಗದಲ್ಲಿ ನಿಲ್ಲದೆ ಓಡಿದೆ

ನೀವು ಹೊರಟಿರುವಾಗ ಯಾರಾದರೂ ಎಲ್ಲಿಗೆ ಎಂದರೆ, ಜೋಕೆ, ಜವಾಬ ಕೊಡಬೇಡಿ. ಈ ಪ್ರಶ್ನೆ ಕೇಳುವ ಈ ಪ್ರಾಣಿಯ ಉದ್ದೇಶವೇನು ಎಂದು ಚಿಂತಿಸಿ.

—ಗೋರೂರು ರಾಮಸ್ವಾಮಯ್ಯಂಗಾರ್.

# ಕ್ಯೂ - ಕ್ಯೂೂ - ಕ್ಯೂೂೂ !!!

ಮೊನ್ನೆ ಸಾಯಂಕಾಲ ಮನೇಗೆ ಬರತಾ ಹಾಗೇ ಬಲಗಡೆ ನಮ್ಮ ಬಟ್ಟೇ ಕೂಪನ್ ಅಂಗಡಿ ಹತ್ತರ ಒಂದು ಬೋರ್ಡ್ ನೋಡಿದೆ. 'ನಾಳೆ ಬೆಳಗ್ಗೆ ರೇಷನ್ ಹಂಚಿ ಕೊಡುತ್ತೇವೆ'' ಅಂತ ಅದರ ಮೇಲೆ ಬರೆದ ಹಾಗೆ ಇತ್ತು. ಯಾವುದಾದರೂ ಕೇಳಿಯೇ ಖಂಡಿತ ಮಾಡಿಕೊಳ್ಳೋಣ ಅಂತ ಅಂಗಡಿಯವನ್ನ ಕೇಳಿದೆ. 'ಬೆಳಗ್ಗೆ ಯೋಳು ಗಂಟೆ ಹೊತ್ತಿಗೆಲ್ಲಾ ಬೇಗನೆ ಬಂದುಬುಡಿ' ಅಂದ ಅಂಗಡಿಯೋನು. "ಸರಿ. ಇವನು ಹೇಳಿದ ಹಾಗೆ ಯೋಳು ಗಂಟೆ ಹೊತ್ತಿಗೆ ಬಂದರೆ ಯೋಳುಬೇಕಾದ್ದೇ ಇಲ್ಲ— ಇವನಂಗಡಿ ಮುಂದೆ ಮುತ್ತಿಕೊಳ್ಳೋ ಇರುವೆ ಸಾಲಿನ ಕ್ಯೂನ" ಅಂತ ಮನಸಿನಲ್ಲೇ ಅಂದುಕೊಂಡು ಮನೇಗೆ ಬಂದೆ. ಬಂದವನೇ, ಎಂಟುಗಂಟೆ ಒಳಗಾಗಿ ಒಂದು ಊಟದ ಶಾಸ್ತ್ರ ಮುಗಿಸಿಕೊಂಡು, "ಏನೇ, ನಾಳೆ ಬೆಳಗ್ಗೆ ಹಂಚಿ ಕ್ಯೂ ಅಂತೆ. ಅವನೇನೋ ಏಳು ಗಂಟೆಗೆ ಬಂದರೂ ಪರವಾ ಇಲ್ಲ, ಅಂದ. ಆದರೆ ನಾನೇನೋ ನಾಕೂವರೆ ಗಂಟೆಗೆಲ್ಲಾ ಅಲ್ಲಿ ಹೋಗಿ, ಅವನ ಅಂಗಡಿ ಮುಂದೆ ಝುಂಡಾಹಾಕಿ ಬಿಡಬೇಕೂ ಅಂತಿದೀನಿ. ಅಲಾರಂ ಇಟ್ಟಿದೀನಿ. ಮಧ್ಯೆ ನನ್ನ ಎಬ್ಬಿಸಬೇಡ" ಅಂತ ಹೇಳಿ, ಹಾಗೇ ಒಂದು ಕತೆ ಪುಸ್ತಕ ಕೈಲಿ ಹಿಡುಕೊಂಡು ದಿಂಬಿಗೆ ತಲೆಕೊಟ್ಟೆ.

ನಾಲ್ಕು ನಾಲ್ಕೂವರೆ ಹೊತ್ತಿಗೆಲ್ಲಾ ಎದ್ದು, ಹಲ್ಲು ಕೂಡ ಉಜ್ಜದೆ ಎದ್ದು ಹೋಗಿ ನೋಡತೇನೆ—ಆ ಬಟ್ಟೇ ಅಂಗಡಿ ಮುಂದೆ, ಈಚೆ ಪಕ್ಕದಲ್ಲಿ ಹದಿನೈದು ಜನ, ಆಚೆ ಪಕ್ಕದಲ್ಲಿ ಹದಿನೆಂಟು ಜನ ಚಾಪೆ, ಜಮಖಾನ, ಹಾಸಿಗೆ ಬಿಡಿಸಿಕೊಂಡು, ಧಿಂರಂಗ ಅಂತ ಬಿದ್ದುಕೊಂಡು ಗೊರಕೆ ಹೊಡೀತಾ ಇದ್ದಾರೆ!

ನೋಡಿದೆ. "ಸರಿ ಬೆಳಗಿನ ಜಾವದ ಚಳೀಲಿ ಯಾರು ಯಾರು ಬರಬಹುದೋ ಅವರೆಲ್ಲಾ ರಾತ್ರಿಯೇ ಬಂದಾಗಿದೆ ಇವರ ಮಧ್ಯೆ ಎಲ್ಲಾದರೂ ಇವರಿಗೆ ಕಾಣದ ಹಾಗೆ ತೂರಿಕೊಂಡಿರೋಣ ಅಂದರೆ, ಮೊದಲು ಬಂದು ಮಲಗಿದವನ ಕಾಲಿಗೆ ಆಮೇಲೆ ಬಂದು ಮಲಗಿದವನು ತಲೆ ಸಿಕ್ಕಿಸಿಕೊಂಡು ಬಿದ್ದಿದ್ದಾನೆ. ಒಳ್ಳೇದು. ಇಲ್ಲಿ ಚಳೀಲಿ ಕೂತು ಏಳು ಗಂಟೇವರೆಗೂ ಒಣಗೋಕಿಂತ, ಆ ಪಕ್ಕದಲ್ಲಿ ದೀಪ ಹತ್ತಿಸಿದ್ದಾನಲ್ಲ ಆ ಆಂಜನೇಯ ಭವನದಲ್ಲಿ ಮುಖಕ್ಕೆ ಇಷ್ಟು ನೀರು ಚಿಮುಕಿಸಿಕೊಂಡು, ಪೀಪೀಗೆ ಇಷ್ಟು ಕಾಪಿ ಹುಯಿದುಕೊಂಡು ಬರೋಣ" ಅಂದುಕೊಂಡವನೇ ಆ ಕಡೆ ಹೊರಟೆ.

ಕಲಿಗಾಲ! ಕಡಲಿಗೆ ಹೋದರೂ ಕಾಲುದ್ದಾನೇ ನೀರು! ಆಂಜನೇಯ ರಮಾರಮಣ ಗೋವಿಂದಾ ಗೋವಿಂದ! ಕಾಪೀಗೂ ಕ್ಯೂನೇ! ಬೆಳಗಿನ ಜಾವ ನಾಕೂವರೆ ಗಂಟೇಗೇ!

ಸರಿ. ಮುಖ ತೊಳಕೊಳ್ಳೋಣ ಅಂತ ನಲ್ಲೀ ಹತ್ತಿರ ಹೋದೆ. ಹೇಳಿದರೆ ನಂಬತೀರೋ ಇಲ್ಲವೋ—ಈ ಕೊರೆಯೋ ಚಳೀಲಿ ತಣ್ಣೀರು ನಲ್ಲೀ ಹತ್ತಿರಾನೂ ಕ್ಯೂ ಅಂದರೆ ಏನು ಹೇಳೋಣ!

ನುಗ್ಗಿ ಹೋಗಿ ಕ್ಯೂ ಕೆಡಿಸಿಬಿಡೋಣವೆ ಅಂತ ಒಂದು ಅರ್ಧ ನಿಮಿಷ ಮನಸ್ಸು ದಂಗೆಯೆದ್ದಿತು. ಆದರೆ ನನ್ನ ಮುಂದೆ ಖಾಕಿ ಬಟ್ಟೆ ಹಾಕಿಕೊಂಡು ಒಬ್ಬ ಮಿಲಿಟರಿ ನಿಂತಿದ್ದ. ಪಾಪ, ಎಷ್ಟು ಹೊತ್ತಿಂದ ನಿಂತಿದಾನೋ ಏನೋ ಕೇಳೋಣ ಅಂತ, ಮೆಲ್ಲಗೆ 'ರೀ' ಅಂದೆ ಆತ 'ಅಬೌಟ್ ಟರ್ನ್' ಅಂದ ಹಾಗೆ ತಿರುಗಿದ. ನೋಡಿದರೆ—ಯಾರು ಇವನೇ! ನಂ ಕಸಕಟ್ಟೆಕಾಯಿ ಕಿಟ್ಟು! ನಂ ಸೀಬೆಮರಕ್ಕೆ ಹತ್ತಿ ನನ್ನ ಕೈಲಿ ಒದೆ ತಿಂದವನು!

'ಇವನಿಗೆ ಹೆದರ್ಕೊಂಡು ಕ್ಯೂ ಮುರೀದೇ ಬಿಟ್ಟೆನಲ್ಲ ನಾನು!' ಅಂತ ಪಶ್ಚಾತ್ತಾಪಪಡುತ್ತಾ, "ಏನೇ ಆದರೂ ಮಿಲಿಟರಿ ಬಟ್ಟೆ ಮಿಲಿಟರಿ ಬಟ್ಟೇನೇ" ಅಂತ ಸಮಾಧಾನಪಟ್ಕೊಳ್ತಾ "ಏನಯ್ಯಾ ಕಿಟ್ಟಿ? ಇದೇನಿಲ್ಲಿ?" ಅಂದೆ..

ಮಿಲಿಟರಿ ಆದರೂ ಕಿಟ್ಟಿ ನಾನು ಕೇಳಿದ್ದಕ್ಕೆ ಜವಾಬು ಹೇಳಿದ. ಅವನು ವಿಮಾನದಳದಲ್ಲಿ ಕೆಲಸದಲ್ಲಿ ಇದ್ದಾನಂತೆ. ಅವರ ಕಂಪನೀಗೆ "ದೊಡ್ಡಕೋಟೆ" ಅಂತ ಒಂದು ಹೊಸಾತರ ವಿಮಾನ ಬಂದಿದೆಯಂತೆ. ಅದನ್ನ ಅವತ್ತೇ ಬೆಳಗ್ಗೆ ಐದು ಗಂಟೆಗೆ ನಮ್ಮೂರಿಂದ ಹೊರಡಿಸಿಕೊಂಡು ಹೋಗಿ, ಅಮೆರಿಕಾ, ಇಂಗ್ಲೆಂಡು, ಜರ್ಮನಿ, ರಷ್ಯ, ಜಪಾನು ಇವುಗಳನ್ನೆಲ್ಲಾ ಮುಟ್ಟಿ, ಹತ್ತು ಗಂಟೆ ವೇಳೆಗೆ ನಮ್ಮೂರಿಗೇ ಹಿಂದಿರುಗಬೇಕಂತೆ.

"ನೀನೂ ಬರತೀಯಾ ಒಂದು ರೌಂಡು? ಬಿಟ್ಟಿ ಟ್ರಿಪ್ಪು! ನೋಡು!" ಅಂದ ಕಿಟ್ಟಿ.

ಕೈ ಗಡಿಯಾರ ನೋಡಿದೆ. "ಐದು ಗಂಟೆಗೆ ಹೊರಡಬೇಕು ಅಂತೀಯ. ಐದಕ್ಕೆ ಐದು ನಿಮಿಷ ಇದೆ. ಇನ್ನೂ ಮುಖಾನೂ ತೊಳೆದಿಲ್ಲವಲ್ಲ", ಅಂದೆ.

"ಹಾ! ಹಾಗೇ? ಮುಖದ ಮನೆ ಹಾಳಾಯ್ತು. ಬಾ" ಅಂದವನೇ ಎಡಗೈಲಿ ನನ್ನೂ ಹಿಡಿದು ಎಳಕೊಂಡು ಓಡಿದ. ಹೊರಗಡೆ ಹೋಟಲು ಪಕ್ಕದ ಜಟಕಾ ಸ್ಟಾಂಡಿನಲ್ಲಿ ಅವನ "ದೊಡ್ಡಕೋಟೆ" ನಿಂತಿತ್ತು. ಕಿಟ್ಟಿ ನನ್ನೂ ಎಳಕೊಂಡು, ಒಳಗೆ ಕೂತು, ಯಾವುದೋ ಮೂರು ನಾಕು ಗುಂಡಿ ಒತ್ತಿದ. ದೊಡ್ಡ ಕೋಟೆ ನೆಲ ಬಿಟ್ಟು ಹೊರಟಿತು.

ಅದೇನು ವಾಯುವೇಗವೋ, ಅದೇನು ಮನೋವೇಗವೋ, ಆ ದೊಡ್ಡ ಕೋಟದ ಧನುರ್ವೇಗ! ನಮ್ಮೂರು ಬಿಟ್ಟು ಇನ್ನೂ ಹತ್ತು ನಿಮಿಷ ಇಲ್ಲ—ಆಗಲೇ "ಅಮೇರಿಕಾ!" ಅಂತ ಕೂಗಿದ ಕಿಟ್ಟಿ!

ಕೆಳಗೆ ನೋಡಿದರೆ ನಿಜವಾಗಿಯೂ ಅಮೇರಿಕಾವೇಯೆ! ನಾನು ಭೂಗೋಳದ ಪುಸ್ತಕದಲ್ಲಿ ಓದಿದ ಹಾಗೆಯೇ—ತದ್ರೂಪು, ತದ್ವತ್ತು, ತತ್ಥತ್ತು!

"ಇದೇನಯ್ಯಾ, ಇಲ್ಲೂ ಕ್ಯೂನೇ? ಇದೇನಿದು? ಬಂದೂಕ ಪಿಸ್ತೂಲು ಇಟ್ಟುಕೊಂಡು ಹೊಡೆದಾಡತಾ ಇದ್ದಾರಲ್ಲ?'! ಅಂದೆ.

"ಅಮೇರಿಕಾದಲ್ಲಿ ಹೀಗೇನೆ. ಕ್ಯೂ ಪದ್ಧತಿಗೆ ಇವರೇ ಪಿತಾಮಹರು. ಅವರೇನು—ನಮ್ಮ ಹಾಗೆ ಸುಮ್ಮನೆ ಕ್ಯೂ ನಿಲ್ತಾರೇನು? ಹೊತ್ತು ಹೋಗೋದು ಹ್ಯಾಗೆ? ಅದಕ್ಕೋಸ್ಕರ ಪಿಸ್ತೂಲು ಬಂದೂಕ ಇಟ್ಟುಕೊಂಡು ಹೊಡೆದಾಡತಾ ಆಟವಾಡತಾ ಇದ್ದಾರೆ. ಹುಂ. ನಮಗ್ಯಾಕೆ ಇದೆಲ್ಲಾ. ಬಾ. ಮುಂದೆ ಇಂಗ್ಲೆಂಡಿಗೆ ಹೋಗೋಣ" ಅಂದ ಕಿಟ್ಟಿ.

ಇಂಗ್ಲೆಂಡಿಗೆ ಬಂದೆವು. ಬಂದರೆ, ಅಲ್ಲೂ ಒಂದೊಂದು ಅಂಗಡಿ ಮುಂದೂ ಅಸಾಧ್ಯವಾದ ಕ್ಯೂ ಕೆಲವರು ಕುರ್ಚಿ ಕಾಲುಮಣೆ ತಂದುಕೊಂಡು ಕುಳಿತಿದ್ದಾರೆ. ಕೆಲವರು ನಿಂತುಕೊಂಡು ಒಬ್ಬರಿಗೊಬ್ಬರು ಖುಷಿಯಾಗಿ ಕತೆ ಹೇಳ್ತಾ ಕೇಕೆ ಹಾಕಿಕೊಂಡು ನಗತಾ ಇದ್ದಾರೆ. ನೋಡಿದರೆ ಅದೇನೂ ಕ್ಯೂ ಇದ್ದ ಹಾಗೇ ಇಲ್ಲ, ವನಭೋಜನದ ಪಂಕ್ತಿ ಇದ್ದ ಹಾಗೆ ಇತ್ತು

"ಹುರ್ರೇ ಇಂಗ್ಲೆಂಡ್!" ಅಂತ ಒಂದು ಕೂಗು ಹಾಕಿ ಜರ್ಮನಿಗೆ ಬಂದು ನೋಡಿದರೆ—ಆ ದೇಶದ ತುಂಬ ಎಲ್ಲಿ ಹುಡುಕಿದರೂ ಒಂದು ಕಣ್ಣಿನ ನೋಟ ನಾಟುವುದಕ್ಕೆ ಕೂಡ ಜಾಗವಿಲ್ಲದ ಹಾಗೆ ಉದ್ದುದ್ದ ಕ್ಯೂ, ಅಡ್ಡಡ್ಡ ಕ್ಯೂ, ದಶದಿಕ್ಕುಗಳಲ್ಲಿಯೂ ಕ್ಯೂ! "ಹೋಗಲಿ ಇಷ್ಟು ಜನ ಕ್ಯೂ ನಿಂತರೂ ಇವರಿಗೆಲ್ಲಾ ಆಗುವಷ್ಟು ಪದಾರ್ಥ ಜರ್ಮನಿಯಲ್ಲಿ ಇನ್ನೂ ಇದೆಯಲ್ಲಾ!" ಎಂದೆ. ಅದಕ್ಕೆ ಕಿಟ್ಟಿ "ಅಯ್ಯೋ ಬೆಪ್ಪೆ! ಇದು ಅದಕ್ಕಲ್ಲ ಕಣೊ ಕ್ಯೂ. ಇದು ಇವರಿಗೆ ಒಂದು ಕಡ್ಡಾಯದ ಮಿಲಿಟರಿ ಶಿಕ್ಷಣ. ಕ್ಯೂ ನಿಲ್ಲಬೇಕು ಅಂತ ಅಂದರೆ, ಕಾಲು ಕೊಳತು ಹುಳು ಬಿದ್ದರೂ ಕ್ಯೂ ನಿಲ್ಲಲೇಬೇಕು. ಜರ್ಮನಿ ಅಂದರೆ ಅದು!" ಅಂತ ಹೇಳತಾ "ಆ ಕ್ಯೂ ಹಾಗಿರಲಿ. ಇಲ್ಲಿ ನೋಡು ರಷ್ಯಾದಲ್ಲಿ" ಅಂದ.

ಎಲಾ, ಇವನ ದೊಡ್ಡಕೋಟಾನೇ! ಎಷ್ಟು ಬೇಗ ಬಂದೆವು ರಷ್ಯಾಕ್ಕೆ! ನೋಡಿದರೆ, "ಏನಿದು, ನಿರ್ಜನ ಸ್ಮಶಾನ ಇದ್ದ ಹಾಗೆ ಇದೆಯಲ್ಲ?" ಅಂದುಕೊಂಡು ಕಿಟ್ಟಿಯ ಕಡೆ ನೋಡಿದೆ. "ರಷ್ಯಾ ಅಂದರೆ ಇದು! ನೋಡು, ಹ್ಯಾಗಿದೆ

ವ್ಯವಸ್ಥೆ. ಜನ ಏನಾದರೂ ಕ್ಯೂ ಬಂದು ನಿಂತರೋ—ಕೆಲಸ ಮಾಡೋದಕ್ಕೆ ಮೈಗಳ್ಳತನ ಮಾಡಿಕೊಂಡು ಕ್ಯೂ ನಿಂತು ಕಾಲಾಕಳೀತಿರಾ ಅಂತ ಸ್ಟಾಲಿನ್ ಅವರಿಗೆ ಚಮ್ಡ ಸುಲಿದುಬಿಡ್ತಾನೆ. ಅಂಗಡೀವನೇನಾದರೂ ಬಾಗಿಲು ತೆಗೆದರೆ—ನಮ್ಮ ಕೆಲಸಗಾರರು ಕ್ಯೂ ನಿಂತುಕೊಳ್ಳೋ ಹಾಗೆ ಮಾಡಿ, ಅವರ ಕೆಲಸಕ್ಕೆ ಕಲ್ಲು ಹಾಕಿ, ನಮ್ಮ ಸಂಸ್ಥಾನಕ್ಕೆ ನಷ್ಟಮಾಡ್ತೀಯಾ ಅಂತ ಆ ಅಂಗಡಿಯವನ್ನ ಸ್ಟಾಲಿನ್ ಗಲ್ಲಿಗೆ ಹಾಕಿಸಿಬಿಡ್ತಾನೆ. ಹೀಗಾಗಿ, ಇಲ್ಲಿ ಜನ ಕ್ಯೂನೂ ನಿಲ್ಲೊಲ್ಲ, ಇಲ್ಲಿಯ ಅಂಗಡೀವರು ಬಾಗಿಲೂ ತೆಗೆಯೋಲ್ಲ. ಹೀಗೆ ಈ ದೇಶದಲ್ಲಿ ಕ್ಯೂ ಪದ್ಧತಿ ತುಂಬ ಯಶಸ್ವಿಯಾಗಿ ನಡೀತಾ ಇದೆ" ಅಂತ ಕಿಟ್ಟಿ ಹೇಳಿದ.

ನನಗೆ ಅರ್ಥವಾಗಲಿಲ್ಲ. "ಅದು ಹ್ಯಾಗಯ್ಯಾ?" ಎಂದೆ. "ಅದು ಹ್ಯಾಗೋ ನನಗೆ ಗೊತ್ತಿಲ್ಲಾಪ್ಪ. ಆ ಭಗವಂತನಿಗೆ ಗೊತ್ತಾಗಬೇಕು ಅಂದ ಹಾಗೆ, ಅವನಿಗೂ ಗೊತ್ತಾಗೋಹಾಗಿಲ್ಲ. ಯಾಕಂದರೆ, ರಷ್ಯಾದಲ್ಲಿ ಭಗವಂತನ್ನ ಒಳಕ್ಕೆ ಸೇರಿಸೋಲ್ಲ" ಅಂದ ಕಿಟ್ಟಿ.

ಅಷ್ಟರಲ್ಲಿ ನಮ್ಮ ವಿಮಾನದ ಮಾರ್ಗದಲ್ಲಿ ಯಾರೋ ಕ್ಯೂ ನಿಂತಿದ್ದ ಹಾಗೆ ಮಸಕುಮಸಕಾಗಿ ಕಾಣಿಸಿತು. "ಕಿಟ್ಟೀ! ಕಿಟ್ಟೀ! ಎದುರಿಗೆ ಕ್ಯೂ! ಎಲ್ಲಾದರೂ ಢಿಕ್ಕಿಹೊಡೆದೀಯಾ!" ಅಂತ ಕೂಗಿದೆ. ಕಿಟ್ಟಿ ಕೇಕೆಹಾಕಿ ನಗುತ್ತ, ಆ ಕ್ಯೂವನ್ನೇ ಭೇದಿಸಿಕೊಂಡು ನುಗ್ಗಿ, "ಅದು ಯಾವ ಕ್ಯೂ ಗೊತ್ತೇನೋ? ಮೊನ್ನೆ ಜಪಾನಲ್ಲಿ ಆಟಂಬಾಂಬ್ ಹಾಕಿದಾಗ ಹರೋಹರ ಅಂದ್ರು ನೋಡು, ಅವರಲ್ಲಿ ನರಕಕ್ಕೆ ಹೋಗೋವ್ರು ಆಚೆ ಹೋಗ್ತಾ ಇದ್ದಾರೆ. ಸ್ವರ್ಗಕ್ಕೆ ಹೋಗೋವ್ರು ಹೀಗೆ ಕ್ಯೂ ನಿಂತುಕೊಂಡು ಕಾಯ್ಕೊಂಡಿದ್ದಾರೆ ಅಷ್ಟೆ. ಇದು ವಿಪಂಚೀಕರಣವಾದ ಪ್ರೇತಗಳ ಪಂಕ್ತಿ—ನಮ್ಮ ಪಂಡಿತರು ಹೇಳೋಹಾಗೆ!" ಅಂದ.

ಇಷ್ಟು ಹೊತ್ತಿಗೆ ನನಗೆ—ಮೊದಲೇ ನಿದ್ರೆ ಸಾಲದು; ಮುಖ ತೊಳೆದಿಲ್ಲ, ಕಾಫಿ ಕುಡಿದಿಲ್ಲ; ದೊಡ್ಡಕೋಟೆದ ಹೊಸ ಅನುಭವ, ತಲೆ ತಿರುಗುತಿದೆ; ಎಲ್ಲೆಲ್ಲಿ ಹೋದರೂ ಕ್ಯೂ, ಕ್ಯೂ, ಕ್ಯೂ; ಇದರ ಜೊತೆಗೆ ಬದುಕಿದವರ ಕ್ಯೂ ಸಾಲದು ಅಂತ ಸತ್ತವರ ಕ್ಯೂ ಬೇರೆ; ನನಗೆ ಹುಚ್ಚು ಹಿಡಿಯುವುದೊಂದು ಬಾಕಿ—ಹಾಗಾಯಿತು.

ಏತನ್ಮಧ್ಯೆ ನನಗೆ ನನ್ನ ಸ್ವಂತ ಪಂಚೆಯ ಕ್ಯೂ ಜ್ಞಾಪಕ ಬಂದು, ಹುಚ್ಚು ಹಿಡಿದವನ ಹಾಗೆ ' ಕ್ಯೂ—ಕ್ಯೂೂ—ಕ್ಯೂೂೂ" ಅಂತ ಕೂಗಿಕೊಂಡು ಎಡ ಮಗ್ಗುಲಿಗೆ ಹೊರಳಿದೆ

"ಇದೇನ್ರೀ, ಕೋಳಿ ಕೂಗಿದ ಹಾಗೆ ಕೂಕ್ಕೋತೀರಿ? ಏಳ್ರೀ. ಎಂಟೂವರೆ ಗಂಟೆ ಆಯ್ತು" ಅಂತ ಮನೇವರು ಅಂದ ಹಾಗಾಯ್ತು.

ಎದ್ದು ನೋಡಿದರೆ—ಗಂಟೆ ಎಂಟೂವರೆ!

—ರಾಜರತ್ನಂ.





ಈ ಚೂಡಾಮಣಿಯನ್ನೇನೋ ತೆಗೆದುಕೊಂಡು ಬಂದೆ- ಈಗ ಈ ಸುಂಕದವರನ್ನು ತಪ್ಪಿಸಿಕೊಂಡು ಶ್ರೀರಾಮನ ಹತ್ತಿರ ಹೇಗೆ ಹೋಗುವುದು ?

# ಬಾರದಿರುವ ಸ್ವಾತಂತ್ರ್ಯ

ಶಿವರಾಮ ಕಾರಂತ

ಇದೇ ಆಗಸ್ಟ್ 15ಕ್ಕೆ ಬರಲಿರುವ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಕುರಿತು ನಾನು ಲೇಖನ ಬರೆಯಬಾರದಾಗಿ ಈ ಪತ್ರಿಕೆಯ ಸಂಪಾದಕರು ನನಗೆ ಅಪ್ಪಣೆ ಮಾಡಿದ್ದಾರೆ. ಅಂಥ ಅಪ್ಪಣೆ ನನ್ನ ಸ್ವಾತಂತ್ರ್ಯಕ್ಕೆ ಕೊರತೆಯೆಂಬುದನ್ನು ಬಲ್ಲೆ. ಬರೆಯದೆ ಕುಳಿತಿರುವ ಸ್ವಾತಂತ್ರ್ಯ ನನಗಿದೆ. ಆದರೆ ಬರೆದು, ಪರರನ್ನು ಕೊರೆಯುವುದು ಹವ್ಯಾಸವಾಗಿರುತ್ತೆ. ನಾನು ಲೇಖನ ಸತ್ಯಾಗ್ರಹ ಮಾಡಿದರೆ ಉಳಿದವರಿಗೆ ಸಂತೋಷವಾದೀತಲ್ಲ. ಸ್ವಾತಂತ್ರ್ಯವನ್ನು ನಾವು ಬಯಸುವುದೇ ಹೆಚ್ಚಿನ ಸುಖ ಸಂತೋಷಗಳಿಗಾಗಿ. ನಾನೇಕೆ ಅದನ್ನು ಕಳೆದುಕೊಳ್ಳಬೇಕು ? ನನ್ನ ಬರಹ ಓದಿ ಓದುಗರಿಗೆ ತಲೆಬೇನೆ ಬಂದರೆ ನನಗೆ ಇನ್ನಷ್ಟು ಸಂತೋಷ ಅಲ್ಲದೆ ಈ ಪತ್ರಿಕೆಯ ಸಂಪಾದಕರು ವೈದ್ಯರು ; ಜನಕ್ಕೆ ತಲೆನೋವು ಬಂದರೆ ಇವರಿಗೂ ಲಾಭ ಇದೆ. ನಿಜಕ್ಕೂ ನೋಡಹೋದರೆ ಕೊರವಂಜಿ ಪತ್ರಿಕೆ—ಅವರ ಉದ್ಯೋಗಕ್ಕೆ ಪೋಷಕವಾದದ್ದು. ಆದುದರಿಂದ ಅವರಿಗೆ ಇಷ್ಟವಿಲ್ಲದ ಸ್ವಾತಂತ್ರ್ಯವನ್ನು ಕುರಿತು ಬರೆಯುವುದಿಲ್ಲ. ಅವರಿಗೇನೆ ಸಾತಂತ್ರ್ಯವಿಲ್ಲ ; ಪರರನ್ನು ಸದಾ ಚುಚ್ಚಿ, ಕಹಿ ಮದ್ದು ಕುಡಿಸುವ ಜನಕ್ಕೆ ವಿರಾಮವೆಲ್ಲಿ ! ವಿರಾಮವಿದ್ದರೆ ಸ್ವಾತಂತ್ರ್ಯ, ಸುಖ— ಎಲ್ಲವೂ ಇದ್ದಂತೆ.

ಸದ್ಯ – ನಾನು ಬಾರದಿರುವ ಸ್ವಾತಂತ್ರ್ಯವನ್ನು ಕುರಿತು ಬರೆಯಲು ಹಟ ತೊಟ್ಟಿದ್ದೇನೆ. ನನಗೆ ವಿರಾಮವಿದೆ, ಸ್ವಾತಂತ್ರ್ಯವಿದೆ. ನನ್ನ ಹೆಸರೂ ಅದೇನೆ: —ಶಿವ್+ಆರಾಮ. ನಾನು ಬದುಕುತ್ತಿರುವುದೂ ವಿರಾಮಕ್ಕಾಗಿ. ಆರಾಮವಾಗ ಬೇಕೆಂದು ಹಲವರು ಸಾಯುವುದೂ ಉಂಟು, ಬದುಕಿದಾಗ ಶಿವರಾಮರೋ Sit+ ಆರಾಮರೋ ಆಗುವ ಲಭ್ಯವಿಲ್ಲದವರು ಸಾವಿನಿಂದ ಆರಾಮರಾಗುವುದ ರಲ್ಲಿ ಸೋಜಿಗವಿಲ್ಲ.

ಬ್ರಿಟಿಷರು ಇದೇ ತಿಂಗಳಲ್ಲಿ ನಮ್ಮ ಊರು ಬಿಡುತ್ತಾರೆಂದು ಕೇಳಿದೆ. ನನ ಗಂತು ಅದರಿಂದ ಬೇಸರ. ಇಷ್ಟುದಿನ ನಮ್ಮ ಮನೆಗೆ ಬಂದು, ಇದ್ದು, ಅಳಿಯ ನಂತೆ ಕಾರುಭಾರು ಮಾಡಿ—ಈ ಮಾವಂದಿರಂತಿರುವ ನಮ್ಮನ್ನು ಮರೆತು ಹೋಗು ವುದರಲ್ಲೇನು ಸೊಬಗಿದೆ ? ನಮಗಂತು ದುಃಖವಾಗದಿದ್ದೀತೇ ? ನಾಳೆ ನಮ್ಮ ಮನೆಯ ಆದರೋಪಚಾರ ಯಾರಿಗೆ ಸಲಬೇಕು.

ಬ್ರಿಟಿಷರು ನಮ್ಮ ಮನೆಬಿಟ್ಟರೆ ಸ್ವಾತಂತ್ರ್ಯ ಬಂತು ಎಂದು ತಿಳಿದಿದ್ದಾರೆ ನಮ್ಮ ಜನ! ನಮ್ಮ ನಮ್ಮ ಮನೆಗಳನ್ನು ನೋಡುವ— ಸೊಸೆಯು ಬಿಡುಗಡೆಯಾಗಿಲ್ಲ. ಸೊಸೆಯು ಗಂಡನ ಜೀವ ಸದಾ ಡಿಪ್ಲೊಮೆಸಿಯಲ್ಲಿಯೇ ಅದ್ದಿ ನಿಂತಿದೆ ಬ್ರಿಟಿಷರು ಹೊರಡುವ ಮೊದಲು —ಪ್ರತಿ ಮನೆಗೂ ಒಂದು ಪಾಕಿಸ್ತಾನ (ಪಾಕ-ಪ್ರಧಾನವಾದದ್ದು) ಇನ್ನೊಂದು ಬಾಕಿಸ್ಥಾನ ಮಾಡಿಕೊಟ್ಟು, ಸೊಸೆಗೆ ಪಾಕಿಸ್ತಾನ ಕೊಟ್ಟು, ಉಳಿದವರಿಗೆ ಬಾಕಿಸ್ಥಾನ ಕೊಟ್ಟು ಹೋಗಬಾರದೇ. ನಮ್ಮ ಮನೆಗಳಲ್ಲಿ ಹರಿದು ತಿನ್ನುವ ರಾಜಕೀಯ ಇಲ್ಲವೆಂದು ಅವರು ತಿಳಿದಿದ್ದಾರೆಯೇ! ತಂದೆ, ಅಜ್ಜಿ, ಅಜ್ಜ—ಶುದ್ಧ ಕನ್‌ಸರ್ವೇಟಿವ್ ಪಕ್ಷ! ಸೊಸೆ ಶುದ್ಧ ಲೇಬರ್ ಪಂಗಡ! ಮಗ ಆಫೀಸಿನಲ್ಲಿನ ಗುಲಾಮ; ಮನೆಗೆ ಬಂದಾಗ ಬಿಸಿ ಬಿಸಿ ಕಮ್ಯುನಿಷ್ಟ! ಇನ್ನು ಅಳಿಯ ಮನೆಗೆ ಬಂದಾಗಲಂತು ಆತ ಸರ್ವಾಧಿಕಾರಿ, ಡಿಕ್ಟೇಟರ.

ಸಮಾಜದಲ್ಲಿ ಕಾಲಿರಿಸಿದರೂ ಅದೇನೆ ಗತಿ. ಶ್ರಾದ್ಧ, ಮದುವೆಗಳನ್ನು ಮಾಡಿಸುವ ಪುರೋಹಿತ ಭಟ್ಟ ತಾಜಾ ಡಿಕ್ಟೇಟರ. ಎಂಥ ರೋಮಾಂಟಿಕ್ ಮದುವೆಯೇ ನಡೆಯಲಿ- ಕುಂಕುಮ ಅರಿಸಿನದ ಮುತ್ತೈದೆಯರಿಂದ ಪ್ರೊಪೊಗಾಂಡಾ ಬೆಳೆಯಿಸಿ, ತನ್ನ ಯಾವತ್ತು ಕಾಯಿದೆಗಳನ್ನು ಚಲಾಯಿಸಿ ಬಿಡುತ್ತಾನೆ. ಸಾವಾದರೂ ಹಾಗೇನೆ. ಅಡುಗೆಗೇ ಕಟ್ಟಿಗೆಯಿಲ್ಲ! ಹೆಣ ಸುಡಲು ಕಟ್ಟಿಗೆಯೆ! ಹೂತು ಬಿಟ್ಟರೇನು—ಅಂದರೆ. ಒಣ ಸೆಗಣಿಯುಲ್ಲಾದರೂ ಸುಡಬೇಕೆಂದು ಅವನ ಅನುಜ್ಞೆ. "ಸ್ವಾಮಿ- ಉದ್ದು ಬೇಳೆ, ಕಾಳು, ಒಂದೂ ಇಲ್ಲದಾಗ ಪಿಂಡ—ವಡೆಗಳನ್ನು ಮಂತ್ರ ರೀಕ್ಷ್ಯಾ ಮಾಡಿ ಮುಗಿಸಬಾರದೇ?" ಎಂದರೆ, ನೀರಿಲ್ಲದೆ ಮಂತ್ರ ಸ್ನಾನ ಮಾಡುವ ಆ ವ್ಯಕ್ತಿ - ಪ್ರತ್ಯಕ್ಷ ಪಿಂಡ, ವಡೆ, ಪಾಯಸ ವಿಧಿಸುತ್ತಾನೆ. ಹೆಂಡತಿಯ ಓಲೆ ಒತ್ತೆಯಿಟ್ಟಾದರೂ ಅವನಿಗೆ ಪಾಯಸ ಬಡಿಸಬೇಕು ಎಂತೆಂತಹ ಕಮ್ಯುನಿಷ್ಟನೂ ಅವನ ಸರ್ವಾಧಿಕಾರದ ಗುಲಾಮನೇ.

ಸಮಾಜದಲ್ಲಿ ಸ್ವಾತಂತ್ರ್ಯ ದೊರೆಯಲು ಇಂಥ ವಿಷಯಗಳಲ್ಲಿ ಕ್ರಾಂತಿಯುಂಟಾಗಬೇಡವೇ—ಎಂದು ವಾದಿಸಿದರೆ ಕೇಳುವವರಾರು? ಸಾವಿನ ಹೆದರಿಕೆಯಿಂದ ತೊಳಲಾಡುವ ಬೆಪ್ಪುತಕ್ಕಡಿಗಳೇ ಎಲ್ಲರೂ; ಸತ್ತಮೇಲೆ ಏನಾಗುತ್ತೇವೋ ಎಂದು ಅಂಜುತ್ತಾರೆ. ಪ್ರಗತಿಶೀಲ ಪತ್ರಿಕೆಗಳು ವಾರದ ಭವಿಷ್ಯ ಪ್ರಕಟಿಸುವಷ್ಟು ಶ್ರದ್ಧೆಯಿಂದ ಇವರ,ವಿಚಾರ ಸ್ವಾತಂತ್ರ್ಯ, ಸಮಾಜದ ಕಟ್ಟಳೆಗಳ ಮುಂದೆ ಮಾಯವಾಗುತ್ತವೆ. ಅದೇಕೋ ತಿಳಿಯೆ! ಸತ್ತವರ ಊರಲ್ಲಿಯೂ ಸರ್ವಾಧಿಕಾರವೇ ಇರಬಹುದೇ. ಅಲ್ಲಿ ಸಮತಾವಾದವಿಲ್ಲವೇ? ಪ್ರೇತಗಳೆಲ್ಲವೂ ಕತ್ತಿ ಕೊಡಲಿ ಹಿಡಿದು ದುಡಿಯಬೇಕಾಗುತ್ತದೆಯೋ—ಯಾರು ಬಲ್ಲರು!

ಇನ್ನು ನಮಗೆ ಧರ್ಮ ಸ್ವಾತಂತ್ರ್ಯವಾದರೂ ಇದೆಯೇ? ಅದೂ ಇಲ್ಲ; ಸ್ವತಂತ್ರ ಧರ್ಮವೂ ಇಲ್ಲ. ಕಟ್ಟಳೆಗೆ ಬಿಗಿದು ಬಿದ್ದ ಕೀಟಗಳಿಗೆ ಸ್ವತಂತ್ರ ಧರ್ಮ

ಎಲ್ಲಿಂದ ಬಂತು ? ಹಿರಿಯರಿಂದ ಬಂದ ಧರ್ಮದಲ್ಲಿ ವಿಶ್ವಾಸವಿಲ್ಲವಾದರೂ ಅಂಥಾ ಚರಣ ದೇವರುಗಳ ಮಾದರಿ—ಅಲ್ಲಿಂದಲೇ ಬರಬೇಕು. ಅದನ್ನು ಕಂಡು ಯಾರಾದರೂ ನಕ್ಕರೆ....ವಿಷ್ಣು ಶಿವರ ಪಟಗಳನ್ನು ಕಿತ್ತು, ಅವೇ ಫ್ರೇಮುಗಳಲ್ಲಿ ಲೆನಿನ್, ಸ್ಟೆಲಿನರ ಚಿತ್ರ ಇರಿಸುತ್ತಾರೆ. ಒಂದು ಗುಂಪು ಹಾಗೆ ಮಾಡಿದರೆ ಬೇರೆ ಗುಂಪುಗಳು – ಕೆ. ಲಕ್ಷ್ಮಿ, ಬಿ. ಕಣನ್‌ಬಾಲಾ, ಸಿ. ಶಾಂತಾರವರ ಚಿತ್ರ ಇರಿಸುತ್ತಾರೆ. ಉಳಿದವರು ಸುಭಾಸರನ್ನೋ ನೆಹರೂರನ್ನೋ, ಗಾಂಧಿಯನ್ನೊ ಆ ಪದವಿಗೇರಿಸಿ ಬಿಡುತ್ತಾರೆ ! ಮೂರ್ತಿ ಪೂಜೆ ತಪ್ಪಿದ್ದೇ ಅಲ್ಲ !

ರಾಜಕೀಯ ಆವರಣವನ್ನಂತು ನೋಡಲೇ ಬೇಕಿಲ್ಲ. ಎಂಥೆಂಥ ಇಸುಮು (-ism)ಗಳ ಓಡಾಟ, ಹಾವಳಿ ಅಲ್ಲಿ. ಹತ್ತು ವರ್ಷದ ಹುಡುಗರು ಸಹ ಎಂಥೆಂಥ ಇಸುಮುಗಳ ಮೇಲೆ ಉಪನ್ಯಾಸ ಬಿಗಿಯುತ್ತಾರೆ. capitalism, communism ಮೊದಲಾದ ಇಸಮುಗಳ ಹಿಂಡಿನಲ್ಲಿ ಕಾಣದ ಇಸಮು ಎಂದರೆ Humanism ಮಾತ್ರ. ಆರ್ಯರ ಕಾಲದಲ್ಲಿ ರಾಜಕೀಯದಲ್ಲಿ ಎರಡು ಪಂಗಡ ಇದ್ದುವಂತೆ. ಒಂದು ಆರ್ಯ ; ಇನ್ನೊಂದು ದಸ್ಯು. (ಅನಾರ್ಯರೆಲ್ಲ ದಸ್ಯುಗಳೇ !) ಅನಾರ್ಯರನ್ನು ಒಮ್ಮೆಗೇ ದಸ್ಯುಗಳನ್ನಾಗಿ ಅವರು ಕರೆಯುತ್ತಿದ್ದಂತೆ—ಈಗಿನ ರಾಜಕೀಯದಲ್ಲೂ ನಡೆದಿದೆ. ಕಮ್ಯುನಿಸ್ಟರಲ್ಲದವರೆಲ್ಲ ಬಂಡವಳುಗಾರರು ! ಬಂಡವಳುಗಾರರಲ್ಲದವರೆಲ್ಲರೂ ಕಮ್ಯುನಿಸ್ಟರು ಅಂದು ಬಿಡುತ್ತಾರೆ—ಜನ. ' ಲಾಭವೆಲ್ಲಾ ತಮಗಿರಲಿ ' ಎಂದು ಪರರನ್ನು ದುಡಿಸುವ ಜಾತಿ ಬಂಡವಳುಗಾರರಂತೆ ; ಇನ್ನೊಂದು ಗುಂಪಿನವರನ್ನು ಕಂಡರೆ ಈ ಜನ—' ಆದಷ್ಟು ಕಡಿಮೆ ಶ್ರಮಮಾಡಿ ಆದಷ್ಟು ಹೆಚ್ಚು ವೇತನ ಗಳಿಸುವ ತತ್ವದವರು "—ಎಂದು ಉಳಿದವರನ್ನು ಅನ್ನುತ್ತಾರೆ. ಇವರ ಮಾರಾಮಾರಿಯಲ್ಲಿ–ಸ್ಟ್ರೈಕಿನ ಸನ್ನಿಪಾತ ಸದಾ ಕುದಿಯುತ್ತಿದೆ ಸಮಾಜದಲ್ಲಿ ! ಈ ಜ್ವರದ ಹಾವಳಿ ಹೆಚ್ಚಿ–ಊರವರು ಮಾತ್ರ ಕಂಗಾಲು. ಆದರೆ ಬಾಯಿ ತೆರೆಯುವುದಕ್ಕಿಲ್ಲ ! ನೀವೂ ಬಂಡವಳುಗಾರರು (ಹಣವಿಲ್ಲದಿದ್ದರೂ) ಅನಿಸಿಕೊಂಡೀರಿ. ಮುಖ್ಯ ತತ್ವ ರಾಜಕೀಯದ್ದು ಹೀಗೆ—ಅವರನ್ನು ಓಡಿಸಿದರೆ ನಿಮಗೆ ಪಟ್ಟ, ನಿಮ್ಮನ್ನೋಡಿಸಿದರೆ ಅವರಿಗೆ ಪಟ್ಟ.

ಈ ತನಕ ಬ್ರಿಟಿಷರ ದೊರೆತನದಲ್ಲಿ—ವಿಚಾರಸ್ವಾತಂತ್ರವಿದ್ದಿಲ್ಲ. ಇನ್ನು ಅದು ಬಂದಿತು ಅನ್ನುತ್ತಾರೆ. ಅದು ಬಂದಿದ್ದರೆ ಇಷ್ಟು ಕಾವು, ಬಿಸಿ, ಅವಶ್ಯವಿರುತ್ತಿರಲಿಲ್ಲ. ಅವರುಮಾಡಿದ ' ವಿಚಾರ 'ವನ್ನು ತಾವು ಕಂಠಪಾಠ ಮಾಡಿಕೊಂಡು ಉಳಿದವರಿಗೆ ಉರುಹಾಕಿಸುವ ಪಂಥಕ್ಕೆ ಅದು ಸ್ವಾತಂತ್ರ್ಯದ ಉದಯವಾಗಿ ಕಂಡೀತು ಉಳಿದವರಿಗೆ ?

ಹಿಂದೆ ಉಪನಯನಮಾಡಿಸುವಾಗ—ಅರ್ಥ ತಿಳಿಯದ ಪುರೋಹಿತ, ತಿಳಿಯಲಾರದ ಹುಡುಗನಿಗೆ ಗಾಯತ್ರಿ ಹೇಳಿ ಕೊಟ್ಟಂತೆಯೇ ಇಂದಿಗೂ ರಾಜಕೀಯದ

ಗಾಯತ್ರಿ ಉಪದೇಶ ನಡೆದಿದೆ. ಇಂಕಿಲಾಬ್ ಜಿಂದಾಬಾದ – ಹೊಸ ಗಾಯತ್ರಿ ಯಷ್ಟೆ! ನಮಗೆ ದೊರಕಿದ್ದು ಗಂಟಲ ಸ್ವಾತಂತ್ರ್ಯ. ವಿಚಾರ ಸ್ವಾತಂತ್ರ್ಯಕ್ಕೆ— ಸ್ವಂತ ಮಿದುಳುಬೇಕು ; ಅಲ್ಲದೆ ಪರರಿಗೂ ಮಿದುಳು ಇದೆ ಎನ್ನುವ ಬುದ್ಧಿಬೇಕು ....ಅಲ್ಲಿಯ ತನಕ ವಿಚಾರ ಸ್ವಾತಂತ್ರ್ಯದ ಮಾತೇ ಇಲ್ಲ.

ರಾಜಕೀಯ ಉಪನ್ಯಾಸ, ಅಗ್ರಲೇಖ, ಚರ್ಚೆ ಯಾವುದನ್ನೇ ಕೇಳ ಹೋದರೂ ಮಿದುಳಿಗೆ ವಿಶ್ರಾಂತಿಯೇ! ಹೆರವರು ಕೂಗುವ ತತ್ವ ಒಪ್ಪಿಕೊಳ್ಳುವ ಮಹಾಜನ ಬೇಕೇ ವಿನಹ ?—ಪ್ರಶ್ನಾರ್ಥಕ ಹೊರಡಿಸುವ ಜನ ಬೇಕಿಲ್ಲ. ಹಾಗಾಗಿ ಬಹುಸಂಖ್ಯಾತರನ್ನೇ ಹುಚ್ಚುಗಟ್ಟಿಸಿ ತೂಗಿಸಬಲ್ಲ ಇಸಮೇ – ಮುಖ್ಯ ರಾಜ ಕೀಯವಾಗಿಬಿಡುತ್ತದೆ.

ಹಳೆಯ ಪಂಡಿತರ ಶಿಕ್ಷಣದ ಕಾಲ ಹೋಗಿ ಹೊಸ ವಿದ್ಯಾಯುಗ ಬಂದಿದೆ— ಎನ್ನುವವರುಂಟು! ಗೊಡ್ಡು ಆಚಾರ್ಯರ ರುಮಾಲೆ, ಶಾಲು ಕಾಣುತ್ತಲಿಲ್ಲ. ಅಷ್ಟೇನೆ. ಬೇರೆ ಉಡುಗೆಯಲ್ಲಿ ಆದೇನೆ ಕಂಠಪಾಠದ ಶಾಲೆ ನಡೆದಿದೆ! ಒಂದಕ್ಕೆ ಶಾಸ್ತ್ರಿಗಳ ಶಾಲೆ ಬೇಕು. ಯಾರಾದರೂ ತರ್ಕಕ್ಕೆ ನಿಂತು, ಅವರೊಡನೆ ಜಗಳಕ್ಕೆ ಹೋದರೆ ಅವರು “ ತೂ, ಮುಟ್ಠಾಳ, ನರಕಕ್ಕೆ ಹೋಗುತ್ತೀಯಾ ’ ಎಂದು ಹೆದ ರಿಸಿಬಿಡುತ್ತಿದ್ದರು. ಈಗಿನ ರಾಜಕೀಯ ಶಾಸ್ತ್ರಿಗಳು, ಅವರನ್ನು ನರಕದ ಗೇಟಿನ ತನಕ ಮುಟ್ಟಿಸಿ ಬರುತ್ತಾರೆ!

ರಾಜಕೀಯ ಬೇಡ, ಧರ್ಮಬೇಡ—ಉಳಿದ ಸ್ವಾತಂತ್ರ್ಯವಾದರೂ ಇರಲಿ ಎಂದು ಈ ಮನುಷ್ಯಜೀವಿ ಬಿದ್ದಿರಲಿಕ್ಕುಂಟೇ! ಅದಕ್ಕೂ ಗತಿಯಿಲ್ಲ. ಅಗಸ್ಟ್ ೧೫ರ ನಂತರ—ಬ್ರೈನ್, ಬ್ರೇನ್ ಬ್ರಾನ್ (Bran)—ಎಲ್ಲಾ ಡಿಫಿಸಿಟು ಕಾಣು ತ್ತಿದೆ. ಈ ತನಕ ಬೇಳೆ, ಬೆಲ್ಲ ಬಂದರೆ ಮನೆಯ ಹಿತ್ತಲಬಾಗಿಲಲ್ಲಿ ಕುಳಿತಾದರೂ ಮಾರುವವರುಂಟು. ಮುಂದೆ ? ನಿಜಕ್ಕೂ ಯುದ್ಧದೇವತೆ, ಜಪಾನು ಶರಣಾಗತ ವಾದ ಮೇಲೆಯೇ ನಮ್ಮ ಊರಿಗೆ ಸವಾರಿ ಬಂದದ್ದು. ಇನ್ನೆಷ್ಟು ದಿನಕಾಲ ಇಲ್ಲಿ ಮೊಕ್ಕಾಮೋ ತಿಳಿಯದು.

ನಡತೆಯಲ್ಲಿ ಆಚಾರ ಸ್ವಾತಂತ್ರ್ಯವಿಲ್ಲ ; ತಲೆಯಲ್ಲಿ ವಿಚಾರ ಸ್ವಾತಂತ್ರ್ಯವಿಲ್ಲ. ಮನೆಯಲ್ಲಿ ಅನ್ನ ಸ್ವಾತಂತ್ರ್ಯವಿಲ್ಲ. ಎಟ್ಲಾಸಿನಲ್ಲಿರುವ ನದಿಗಳಿಗೆ ಅಡ್ಡಗೆರೆ ಹಾಕಿ, ಕಾಳಸಂತೆಯಿಂದ ಸಿಮೆಂಟು ತಂದು, ಸುರಿದು ನೀರ್ಕಟ್ಟೆಮಾಡಿ, ಆಮೇಲೆ ಕಾಲುವೆ ಕಡಿದು—ಬೆಳೆ ಬೆಳೆಯಿಸಿದರೆ ಬೇಳೆ ಹುಟ್ಟೀತು, ಅಕ್ಕಿ ಬಂದೀತು. ಅವನ್ನು ಕಂಡೂ ಕಾಣದಂತಾಗತೊಡಗಿ ಎಂಟು ವರ್ಷವಾಯಿತೇ! ಇನ್ನು ಕಾಣುವ ಯೋಗ ಬರಲು ಹತ್ತು ವರ್ಷ ಬೇಕಾದೀತು—ಅದೂ ಇದೇ ಸರಕಾರ ಉಳಿದರೆ. ಬ್ರಿಟಿಷರನ್ನೋಡಿಸಲು ಕಾಂಗ್ರೆಸು ಬೆವರು ಸುರಿಸಿ, ಅದನ್ನು ಉಜ್ಜಿಕೊಳ್ಳುವಾಗ,

ಪಾಕಿಸ್ತಾನ್ ರಾಜಸ್ತಾನ್ ಸಾಧನೆ ಮಾಡಿಕೊಂಡ ಹಾಗೆ—ಬಂದ ಸ್ವಾತಂತ್ರ್ಯವನ್ನು ಇನ್ನು ಗಬಕ್ಕನೆ ಕಾಂಗ್ರೆಸ್ಸಿನಿಂದ ಕೇಳುವ ಸುಲಭೋಪಾಯ ಹೂಡುವ ಪಂಗಡ ಗಳೂ ಇಲ್ಲವೆಂದಲ್ಲ. ಅಂಥವರು ಬಂದರೆ – ಹತ್ತುವರ್ಷದ ಮೇಲೂ ಬೇಳೆ, ತುಪ್ಪ, ಸಿಗುವುದು ಕಷ್ಟ.

ಇಷ್ಟೆಲ್ಲ ಆಗುವಾಗ ಬರಗಾಲದ ಸಿಲ್ವರ್ ಜೂಬಿಲಿಯಾಗುತ್ತದೆ. ಈ ನಡುವೆ ಬೇಳೆ, ಸಕ್ಕರೆ ತುಪ್ಪ ಕಾಣದೆ ಹುಟ್ಟಿದ ಜನಾಂಗಕ್ಕೆ—ನಾಳೆ ಸಿಗಬಹುದಾದ ಅದನ್ನು ತಿನಲು ಕಲಿಸುವುದೂ ಒಂದು ತಾಪತ್ರಯವೇ. ಅಲ್ಲದೆ ನಮಗೇನೆ ತಿಂಡಿ —೨೦೦೦ ಕೆಲೊರಿಯಿಂದ ೧೦೦೦ಕ್ಕೊ ಅದಕ್ಕೂ ಕಡಿಮೆಗೊ ಇಳಿದದ್ದು— ನಾಳೆ ೩೦೦೦ ಕೊಟ್ಟರೆ—ಕಂಗಾಲಾಗದೆ ಇದ್ದೀತೇ !

ಸದ್ಯಕ್ಕೆ ರೇಶನಿಂಗ್ ಹೋದರೆ ಅನ್ನ ಸ್ವಾತಂತ್ರ್ಯವಾದರೂ ಬಂತು ಎನ್ನ ಬಹುದಿತ್ತು. ಆದರೆ—ಎಂಬ ಹೆದರಿಕೆ. ನಾಳೆ ಶ್ರಮಗಾರರ ಸರಕಾರ ಬಂದು ಬೆವರು ಸುರಿಸಿದವರಿಗೆ, ಸುರಿಸಿದ ಬೆವರಿನ ತೂಕಕ್ಕೆ ಸಮನಾಗಿ—ಅನ್ನ ಎಂದು ಶಾಸನ ಮಾಡಿದರೆ ! ನನ್ನಂಥವ ಕೂತಲ್ಲಿ ಕೂತಿರುವ ಜೀವಿಯ ಗತಿ........ಆದರೂ ಒಂದು ಲಾಭವಿದೆ. ಅರಬ್ಬಿ ಸಮುದ್ರತೀರದ ನಾವು—ಮಳೆಗಾಲದಲ್ಲಿಯೂ ಬೆವರು ತ್ತಿರುತ್ತೇವೆ. ಬೆಂಗಳೂರಿನ ಸಂಪಾದಕರುಗಳಿಗೇನೆ ಅಡಚಣೆ ಬಂದೀತು. ಒಟ್ಟಿಂದ ಭವಿಷ್ಯ—ಚೆನ್ನಾಗಿಲ್ಲ.

ಬಾರದ—ಆಹಾರ, ಆಚಾರ, ವಿಚಾರ ಸ್ವಾತಂತ್ರ್ಯಗಳಿಗಾಗಿ ಅಳಬೇಕೋ, ಬರುವ ರಾಜಕೀಯ ಸ್ವಾತಂತ್ರ್ಯಕ್ಕಾಗಿ ನಗಬೇಕೋ ನನಗೇ ತಿಳಿಯದಾಗಿದೆ.

---

ಒಣಗು ಕವಿಗಳೆಷ್ಟೊ ಜನ ಕ್ಲೇಶಗೊಳುತಲಿರಲು ಮನ
ಜಾಗರಣೆಗಳೆಷ್ಟೊ ಮಾಡಿ ಇರುಳ ಕಳೆವರು.
ತಾವೆ ನಿದ್ದೆಗೆಟ್ಟು ರಾತ್ರಿ ತಮ್ಮ ವಾಚಕರಿಗೆ ಖಾತ್ರಿ
ಯಾಗಿ ನಿದ್ದೆಯಡಸುವಂತೆ ಮೋಡಿಗೈವರು.

* * * *

ಝುಗಝುಗಿಸುವ ಇನ ಪಡುವಣ ಕಡಲೊಳು
ಮುಳುಗಲು ನಿಶೆ ಹಬ್ಬಿತು ಭರದಿ
ನಿಗಿನಿಗಿ ಹೊಳೆಯುವ ಕೆಂಡವು ನೀರೊಳು
ಬಿದ್ದರೆ ಕಪ್ಪಾಗುವ ತೆರದಿ !

—ಕಚಕುಳಿ.

# ಗಂಡ್ಸಲ್ವೆ, ಗಂಡು!?

---

1. ' ದುಡಿದೂ ದಣಿದೂ ಬಂದ ದುಡ್ಡೆಲ್ಲಾ
ಸಿನಿಮ ಹೋಟಲ್ ಹೊಗೇ ಬತ್ತಿ ;
ಮನೆ ಮಡದಿ ಮಕ್ಕಳಿಗೆಲ್ಲಾ
ಕೊಡೋದೇನು,........ಕಡೇಗೆ ಬತ್ತಿ " :
ಎಂದೇನಾದ್ರು ಅಂದ್ ಗಿಂದ್ ಬಿಟ್ರೆ
ನಾನ್ ತಾಲೀ ಕಟ್ಟಿದ ಹೆಣ್ಣು,........
ಹಲ್ಲಲ್ ಕಡೀತಾ, ಮಿಸೇ ತಿರುವ್ತಾ,
ಅರಳಿಸ್ತೇನೆ, ಕಣ್ಣು !
ಹೆದರ್ಕೊಂಡ್ ನಡ್ಗಲೀಂತ, ಆ ಹೆಣ್ಣು !
ನಾ ಗಂಡ್ಸಲ್ವೆ, ಗಂಡು !?

2. ಅಲ್ಲಿಲ್ ತಿರುಕ್ಕೊಂಡ್
ಹಲ್ಲಲ್ ಕಿರ್ಕೊಂಡ್
ತಿಂದ್ಕೊಂಡ್ ತೇಕ್ಕೊಂಡ್
ಕಂಡ್ಕಂಡ ಹೆಂಗಳ್ಗೆ
ಕಣ್ಗಿಣ್ ಮಿಟಕಿಸ್ತ
ಮನೆ ಸೇರ್ತಾನ್, ಗಂಡು ;—
ಮೂತಿ ಸೊಟ್ಮಾಡಿ
ಮೋರೆ ಸಿಂಡ್ರಿಸಿ,
ಗರ್ ಗುರ್ ಎಂದ್ರೆ, ಹೆಣ್ಣು,—
ದವಡೆ ಕಚ್ಕೊಂಡ್, ಮುಷ್ಟಿ ಮೇಲೆತ್ತಿ,
' ಮೂಳೆ ಮುರಿದ್ಬಿಟ್ ಮೂಟೆಕಟ್ತೀನ್ ',
ಎಂದು ಗುಟರ್ ಹಾಕ್ತಾನ್, ಗಂಡು !
ಗಂಡ್ಸಲ್ವೆ, ಗಂಡು !?

3. ಮನೆ, ಮಕ್ಳು, ಕಸ, ಮುಸರೆ
ಕೆಲಸ ಮಾಡ್ಕೊಂಡ್
ಮೂಲೇಲ್ ಮುದುರ್ಕೊಂಡ್
ಮೌನವಾಗಿರೋದ್ಬಿಟ್ಟು,—
ಹೊಟ್ಟೆಗೆ ಬಟ್ಟೆಗೆ ಕೊಟ್ ಕಾಪಾಡೋ
ಗಂಡಿನ ಮೇಲೇ ಜೋರ್ಮಾಡಿದ್ರೆ,
ಬಡ ಹೆಣ್ಣು,—
ತಡಕೊಂಡ್ ಸುಮ್ನೇ ಇರೋದು ಹೇಗೆ,
ಮಿಾಸೆ ಇರೋ ಮೋರೆ ?—
ಗಂಡ್ಸಲ್ವೆ, ಗಂಡು ! ?

4. ' ಹೊಸಲು ದಾಟಿದರೆ ಹೊಡೆದ್ಬಿಟ್ಟೇನು ;
ಹೊರಗೆ ಹೋದರೆ ಹೂತ್ಬಿಟ್ಟೇನು ;
ಅಂಗಡೀಗೆ ಹೋದರೆ ಗುಂಡಿಗಿಟ್ಟೇನು ;
ಅಲ್ಲಿಲ್ಲಲೆದರೆ ಹಲ್ಲುದುರಿಸೇನು ;
ಅತ್ತಿತ್ತ ನೋಡಿದರೆ ಕತ್ತುಮುರಿದೇನು ;
ಹೆಚ್ಚಾತಾಡಿದರೆ ಹುಚ್ಚು ಬಿಡಿಸೇನು ,
ಹೊಂದ್ಕೊಂಡಿರದಿದ್ರೆ ಕೊಂದ್ಬಿಟ್ಟೇನು '
— —ಅಂದ್ಕೊಂಡು, ಹೆಣ್ಣನ್ನ
ಹೆದರಿಕೇಲಿಟ್ಕೊಂಡು,
ಮನೆಮಡದೀಗೆ ಅರಸಾಗಿ ಆಳಬೇಕು,
ಸೊಗಸಾಗಿ ಬಾಳಬೇಕು. ಗಂಡು !
ಗಂಡ್ಸಲ್ವೆ, ಗಂಡು ?!!

—ಬುಳ್ಳ.

— — o ——

# ನಮ್ಮ ನಾಡಿಗೆ ನಮ್ಮ ತ್ಯಾಗ

"ಕೊರವಂಜಿ"ಯ ಸಂಪಾದಕರೆ, ಸ್ವಾಮಿ,

ಅದು ಯಾವ ಗಳಿಗೆಯಲ್ಲಿ ನಮ್ಮ ಪ್ರಿಯ ಬಾಪೂಜಿ 'ಕ್ವಿಟ್ ಇಂಡಿಯಾ' ಘೋಷಣೆ ಕೂಗಿದರೋ — ನಮ್ಮ ದೇವರ ಮುಂದಾಸನದ ಮುಂದೆ। ರಂಗವಲ್ಲಿಯಲ್ಲಿ, ಅಡುಗೆಯ ಮನೆಯ ಒಲೆ ಮುಂದೆ ಬೆರಣಿಬೂದಿಯಲ್ಲಿ, ಸ್ನಾನದ ಮನೆಯ ಮಸಿಗೋಡೆಯ ಮೇಲೆ ಸುಣ್ಣದ ನೀರಿನಲ್ಲಿ, ಕಡೆಗೆ ಕಕ್ಕಸ್ಸಿನ ಮಾಸಲು ಗೋಡೆಯ ಮೇಲೆ ಮೊಂಡು ಮೊಳೆಚೂರಿನಲ್ಲಿ ನಮ್ಮ ಮಕ್ಕಳು ಬರೆದದ್ದೂ ಬರೆದದ್ದೆ;—'ಭಾರತ ಬಿಟ್ಟು ತೊಲಗಿ!', 'ಭಾರತ ಬಿಟ್ಟು ತೊಲಗಿ!' ಅಂತ. ಮೊದಲು ಒಂದೆರಡು ದಿವಸ ಅದನ್ನ ನೋಡಿದಾಗ ನಾನೂ ನನ್ನ ಅರ್ಧಾಂಗಿಯೂ ಗಾಬರಿಬಿದ್ದೆವು — "ಏನು? ಹೀಗೂ ಉಂಟೆ ಕಲಿಗಾಲ ಅಂದರೆ! ಹೆತ್ತ ತಂದೆತಾಯಿಾನ ತೊಲಗಿ ಅಂತ ಅಂತಾರಲ್ಲ ಮಕ್ಕಳು! ಅದೂ ಮನೇ ಬಿಟ್ಟು ಅಲ್ಲ, ಭಾರತವನ್ನೇ ಬಿಟ್ಟು ತೊಲಗಬೇಕಂತೆ! ಅಯ್ಯೋ! ಹೀಗೂ ಉಂಟೇ, ಪ್ರಸನ್ನ ವೆಂಕಟರಮಣಸ್ವಾಮೀ!" ಅಂತ ಬೆಚ್ಚಿದೆವು; ಬೆದರಿದೆವು; ಕವಿಗಳು ಹೇಳೋ ಹಾಗೆ -ಬೆವರಿದೆವು. ಕಡೆಗೆ "ಇದು ನಮ್ಮನ್ನ ಕುರಿತದ್ದಲ್ಲ. ದೂರದಲ್ಲಿ ಆ ಗಾಂಧಿ ಕೂಗಿದ್ದು ನಮ್ಮ ಮಕ್ಕಳ ಹೃದಯದಲ್ಲಿ ಹಾಗೇ ಗುಡುಗುಡು ಅಂದದ್ದು" ಅಂತ ತಿಳಿದ ಮೇಲೇನೇ ನಮಗೆ ಕಣ್ಣುಗುಡ್ಡೆ ಕೆಳಗಿಳಿದು ಬಂದದ್ದು.

ಇದಾದ ಮೇಲೇನೇ, ಆವಾಗಿಂದಲೂ ನಮಗೆ "ನಮ್ಮ ಮಕ್ಕಳಿಗಿರೋ ಈ ದೇಶಭಕ್ತಿ, ರಾಷ್ಟ್ರಪ್ರೇಮ ಇತ್ಯಾದಿಗಳಲ್ಲಿ ಒಂದಂಶವಾದರೂ ನಮಗೆ ಇಲ್ಲದಿದ್ದರೆ ನಾಚಿಕೆಗೇಡು" ಅಂತ ನಾನೂ ನನ್ನ ಹಾಗೇ ಇನ್ನೊಂದು ಎಂಟು ಹತ್ತು ಗಂಡಸರೂ ಹಾಗೇ ಒಂದು ದಿನ ಇಸ್ಪೀಟು ಆಡ್ತಾ, ಮಳೆ ಮಿಂಚು ಗಾಳಿ ಅತಿಯಾಗಿಬಿಟ್ಟು ದೀಪ ಆರಿಹೋದಾಗ, ಹಾಗೇ ಕೂತು ಯೋಚನೆ ಮಾಡಿದ್ವು. ಕಡೇಗೆ ನಮಗೇ ಅನ್ನಿಸ್ತು—'ಈ ಭಾರತದಿಂದ ಯಾರನ್ನ ತೊಲಗಿಸಬೇಕೋ ಅವರನ್ನ ತೊಲಗಿಸೋಕೆ ನಾವೂ ನಮ್ಮ ಕೈಲಾದ ತ್ಯಾಗ ಯಾಕೆ ಮಾಡಬಾರದು?' ಅಂತ.

ಆದರೆ ಏನು ತ್ಯಾಗ ಮಾಡಬೇಕು ಅನ್ನೋದು ಅವತ್ತು ಹೊಳೀಲಿಲ್ಲ.

ಹೀಗೇ ಇದುವರೆಗೆ ಹಾಗೂ ಹೀಗೂ ಐದು ವರುಷ ಕಳೆದುಹೋಯ್ತು. ನಾವೂ ನಿರ್ವಂಚನೆಯಾಗಿ ಈ ವಿಷಯ ವನ್ನು ಕುರಿತು ಕೂಲಂಕಷವಾಗಿ ಚರ್ಚೆ ಮಾಡತಾನೇ ಇದ್ದೇವೆ—ಪ್ರತಿಯೊಂದು ಸಲ ಕರೆಂಟು ನಿಂತು ಕತ್ತಲೆ ಕವಿದು ಕೊಂಡಾಗಲೆಲ್ಲಾ. ಆದರೆ ದೈವದ ಮುಂದೆ ಮನುಷ್ಯಪ್ರಯತ್ನ ಯಾವ ಮೂಲೆ? ಆ ಭಗವಂತನ ಪ್ರೇರಣೆ ಇಲ್ಲದೆ ಈ ನರನ ಕುರಿಮನಸ್ಸು ಒಂದು ಹುಲ್ಲೆಸಳನ್ನಾದರೂ ತನ್ನ ಹಲ್ಲಿನಿಂದ ಕಚ್ಚಬಲ್ಲುದೆ!

ಆದರೆ, ಹಾಗೆಂದು ದೈವದ ಇಚ್ಛೆ ಯನ್ನು ಕಾದು ಕುಳಿತುಕೊಳ್ಳಲು ಇದು ಸಮಯವಲ್ಲ, ಅಲ್ಲವೆ? ಅವಕಾಶವಿಲ್ಲ, ಅಲ್ಲವೆ? ಇದೇ ಅಗಸ್ಟ್ ೧೫ರ ವೇಳೆಗೆ ಎಂದೋ ತೊಲಗಬೇಕಾಗಿದ್ದವರು ಈಗ ತೊಲಗಿಯೇ ಹೋಗಿ ಬಿಡುವರಲ್ಲವೆ? 'ನಾವು ದೇಶಕ್ಕಾಗಿ ಏನೂ ತ್ಯಾಗಮಾಡ ಲಿಲ್ಲ' ಎಂಬ ಅಪವಾದವನ್ನು ಹೊತ್ತು ಬದುಕುವುದಕ್ಕಿಂತ ಆ ೧೫ರ ಒಳಗಾಗಿ ನಾವೂ ಏನನ್ನಾದರೂ ತ್ಯಾಗಮಾಡಿ, ಇತರ ತ್ಯಾಗಿಗಳ ಹಾಗೆಯೇ ಕೀರ್ತಿ ಶೇಷರಾಗುವುದು ಇಹಪರಗಳಿಗೆ ಸಾಧಕ ವಲ್ಲವೆ?—

ಹೀಗೆಂದು ಅನೇಕ ರೀತಿಯಾಗಿ ನಾವೇ—ಎಂದರೆ ನಾನೂ ನನ್ನಂತಹ ಇನ್ನಿತರ ಎಂಟು ಹತ್ತು ಗಂಡಸರೂ— ಚರ್ಚೆ ಮಾಡಿ, ಒಂದು ಒಮ್ಮತವಾದ ತ್ಯಾಗಕ್ಕೆ ತೀರ್ಮಾನಿಸಿಕೊಂಡಿದ್ದೇವೆ.

ಅದು ಏನೆಂದರೆ:—ನಾವು (ಎಂದರೆ ನಾನೂ ನನ್ನಂತಹ ಇತರ ಎಂಟು ಹತ್ತು ಗಂಡಸರೂ) ನಮ್ಮ ಹೆಸರುಗಳನ್ನು ಬರೆಯುವಾಗಲೆಲ್ಲ K. K. V. ಭಟ್ಟ, H. L S. Rao, P. G. ತಿವಾಸಿ, M. D. ವಿಶ್ವೇಶ್ವರ ಎಂದು ಇದೇ ರೀತಿ ಯಾಗಿ ಮೊದಲರ್ಧ ಇಂಗ್ಲಿಷು, ಕಡೆ ಯರ್ಧ ಕನ್ನಡ ಆಗಿ ಚಟ್ನೀಗಾರರಂ ತಿರುತ್ತಿತ್ತು. ಈಗ ನಾವು ಅದನ್ನು ಬಿಟ್ಟು ಶುದ್ಧ ಕನ್ನಡದಲ್ಲಿಯೇ ನಮ್ಮ ಹೆಸರುಗಳನ್ನು ಹೇಳಿಕೊಳ್ಳಬೇಕೆಂದೂ, ಸಂಕ್ಷೇಪವಾಗಿ ಸೂಚಿಸಬೇಕಾದ ಕಡೆ ಪ್ರತಿ ಪದದ ಮೊದಲನೆಯ ಅಕ್ಷರಗ ಳನ್ನು ಆರಿಸಿಕೊಳ್ಳಬೇಕೆಂದೂ ನಾವು ತೀರ್ಮಾನಿಸಿದ್ದೇವೆ. ಉದಾಹರಣೆಗೆ– ನಮ್ಮ ಸ್ನೇಹಿತರ ಜ್ಞಾತಿಯೊಬ್ಬ "G. L. ಮರಿಯ" ಎಂಬುವನು "ಗು. ಲಾ. ಮ." ಎಂದು ದಸ್ಕತು ಮಾಡುತ್ತಾನೆ. ಅವನಂತೆಯೇ ನಾವೂ ಮೊದಲು ನಮ್ಮ ಹೆಸರುಗಳಿಂದ ಈ ಇಂಗ್ಲಿಷನ್ನು ತೊಲಗಿಸಬೇಕೆಂದು ನಿರ್ಧರಿಸಿದ್ದೇವೆ.

ನಾವು ಮಾಡುವ ಕೆಲಸವಾದರೂ ಮೇಲೆ ಹೇಳಿದ ಮರಿಯನ ಹೆಸರಿ

ನಂತೆಯೇ ಅವಿವೇಕಿಗಳ ದೃಷ್ಟಿಯಲ್ಲಿ ಹಾಸ್ಯಾಸ್ಪದವಾಗಬಹುದಾದರೂ, ದೇಶ ಕ್ಕೋಸ್ಕರ ನಮ್ಮ ಮಾನ ಮರ್ಯಾದೆಗಳ ವನ್ನಾದರೂ ನಾವು (ಎಂದರೆ ನಾನೂ ನನ್ನಂತಹ ಇತರ ಎಂಟು ಹತ್ತು ಗಂಡ

ಸರು) ತ್ಯಾಗಮಾಡಲು ಸಿದ್ಧರಾಗಿರುವೆ ವೆಂಬುದನ್ನು ತಾವು ದಯವಿಟ್ಟು ತಮ್ಮ "ಕೊರವಂಜಿ"ಯ ಸ್ವಾತಂತ್ರ್ಯ ಸಂಚಿಕೆಯಲ್ಲಿ ಪ್ರಕಟಿಸಬೇಕಾಗಿ ಕೋರುತ್ತೇವೆ,

ಇಂತೀ ತಮ್ಮ ವಿಧೇಯರು—

೧. ಕೆಬ್ಬಿನಗದ್ದೆ ಕೆಪನಯ್ಯನ (ಮಗ) ವಾಸುದೇವ ಭಟ್ಟ
೨. ಹೊಸಕೇರಿ ಲಕ್ಷ್ಮಣರಾಯರ (ಅಳಿಯ) ಸುಬ್ಬರಾಯ
೩. ಪಿನ್ನಪಲ್ಲಿ ಶಾನುಭೋಗ ಚಿಕ್ಕಯ್ಯ
೪. ಕೋಲಾಟದ ತಿಪ್ಪಯ್ಯನ (ಮಗ) ಮಂಗಳಾರತಿ ಗಣಪಯ್ಯ
೫. ಕಡೇಬೀದಿ ಸಾವುಕಾರ್ ಮುನಿಸುಬ್ಬರೆಡ್ಡಿ
೬. ಹೆಂಡದ ಗಡಿಗೆ ಸುಬ್ಬುಗ
೭. ಪತ್ತೇದಾರ್ ಜೀವನರಾಂ ತಿವಾಸಿ
೮. ಮೂಲೇಮನೆ . ದೇವಯ್ಯನ (ಮಗ) ವಿಶ್ವೇಶ್ವರ
೯. ಹನುಮನ ಜಾಗಟೆ ಮಾದ

---

ಕರಾಗ್ರೇ ವಸತೇ ಕುರ್ಷಿದ್, ಮಧ್ಯೇ ಮುಮ್‌ತಾಸ್ತಥೈವ ಚ ।
ಕರಮೂಲೇ ಜಯಶ್ರೀಚ, ಪ್ರಭಾತೇ ಕರದರ್ಶನಂ ॥
ವಾಸ್ತೀ, ಸ್ವರ್ಣಲತಾ, ಶಾಂತೀ, ನೀನಾ ಚ ಸುರಿಯಾ ತಥಾ ।
ಪಂಚ ತಾರಾಃ ಸ್ಮರೇನ್ನಿತ್ಯಂ ಮಹಾಪಾತಕ ನಾಶನಂ ॥

—ವಿ. ಸತ್ಯನಾರಾಯಣ.

* * * *

"ರೇಷನ್ನಧಿಕಾರಿಗಳನು ನನ್ನಯ ಹೆಸರೊಳೆ ಕರೆಯುತ ಜನರೆಲ್ಲ
ನಮ್ಮ ಕುಲಕ್ಕವಮಾನವ ಗೈವರು ಇವರಿಗೆ ತುಸವೂ ದಯೆಯಿಲ್ಲ?"
ಎಂದಳುತಿದ್ದಿತು ಇರುಳೆಲ್ಲ - ನೋಡಿದವರದು ಹೆಗ್ಗಣವಲ್ಲ!

—ಕಚಕುಳಿ.



ಅಳಿಲು ಸೇವೆ ಎಂದರೆ—ಹೀಗಿದ್ದಿರಬಹುದೇ........?

# ಊಟೋಪಚಾರ

---

" ಬಂದ್ರಾ ? ! ಬಹಾಳ ಸಂತೋಷ, ಬನ್ನಿ ಬನ್ನಿ. ಎಲ್ಲಿ ಬರೋದಿಲ್ವೋ ಅಂತ ಅಂದ್ಕೊಂಡಿದ್ದೆ ! ಬನ್ನಿ, ಬನ್ನಿ ",

ಗುಂಡಣ್ಣೋರ ಸ್ವಾಗತ, ನಮಗೆ ! ಗುಂಡಣ್ಣೋರು ನಾಣಿಯ ಸೋದರ ಮಾವ ; ನಾಣಿಯೂ ನಾನೂ ಅಪ್ತಗೆಳೆಯರು. ನಾವಿಬ್ಬರೂ ಬೆಂಗಳೂರಿಗೆ ಹೋಗಿದ್ದಾಗ ಮೊನ್ನೆ ಸಂಜೆ ನಾಣಿ ತನ್ನ ಸೋದರಮಾವನ ಯೋಗಕ್ಷೇಮ ವಿಚಾರಿಸಲು ಅವರ ಮನೆಗೆ ಹೋಗಿದ್ದ. ಜೊತೇಲಿ ನಾನೂ ಹೋಗಿದ್ದೆ- ಸರಿ ಅವ ನೊಡನೆ ನನಗೂ ಊಟಕ್ಕೆ ಕರೆ ಬಂತು ಬಿಟ್ಟೆ ಊಟ ಅಂದರೆ, ಒಪ್ಪೊತ್ತಾದರೂ, ಈ ಕಾಲದಲ್ಲಿ ಬಿಡೋದುಂಟೆ ! ಅಲ್ಲದೆ, ಊಟಕ್ಕೆ ಕರೆದರೆ ಹಿಂದು ಮುಂದು ನೋಡದೆ ಒಪ್ಪಿಕೊಂಡು ಬಿಡೋಷ್ಟು ಸರಳಸ್ವಭಾವ ನನ್ನದು.

ಗುಂಡಣ್ಣೋರು ಒಳ್ಳೆ ಮನುಷ್ಯರು, ದೊಡ್ಡ ಸಂಸಾರಿ, ಸ್ವಂತ ಮನೆ ಇದೆ, ರಿಟೈರಾಗಿ ನಾಜೋಕಾದ ಜೀವನ, ಮರ್ಯಾದಸ್ತರು ಅಂತ ನಾಣಿ ನನಗೆ ಆಗಾಗ ಹೇಳ್ತಾ ಇದ್ದ. ಮೊನ್ನೆ ಅವರನ್ನು ನೋಡಿದಾಗ ನನಗೆ ಬಹಳ ಸಂತೋಷವಾಯಿತು. ಅವರ ಸಂಭ್ರಮದ ಸ್ವಾಗತಕ್ಕೆ ನಾವು ಸೋತು, " ಉಂಟೆ ಉಂಟೆ, ........ಎಲ್ಲಾದರೂ ಉಂಟೆ, ....... .. ಬರದೇ ಉಂಟೆ, ಹಿ ಹಿ ಹಿ ', ಎಂದು ಹಲ್ಲು ಕಿರಿಯುತ್ತ ಒಳಗೆ ಹೋಗಿ ಕುಳಿತುಕೊಂಡೆವು.

" ಸ್ನಾನವಾಯಿತು ತಾನೇ ? "

ನಾವು ಸ್ನಾನ ಮಾಡಿರಲಿಲ್ಲ. ಬೆಳಗ್ಗೆ ಎದ್ದು ಹೋಟಲಿಗೆ ಹೋಗಿ ತಿಂಡಿ ಕಾಫಿ ತೀರಿಸಿ-ಕೊಂಡು, ಸಿನಿಮ ಮಾರ್ನಿಂಗ್ ಷೋ ಮುಗಿಸಿಕೊಂಡು ಗುಂಡಣ್ಣೋರ ಮನೆಗೆ ಬರುವಾಗ ಊಟದ ಹೊತ್ತು ಮೀರಿತ್ತು. ಇನ್ನು ಸ್ನಾನಕ್ಕೆಲ್ಲಿ ವಿರಾಮ ! ' ಸ್ನಾನ ಸಂಜೆ ಮಾಡಿದರಾಯ್ತು : ಹಸಿವಾಗುತ್ತೆ, ಊಟ ಮುಗಿಸೋಣ, ಕಾದಿರ್ತಾರೆ, ' ಅಂತ ನಾಣಿ ಹೇಳಿದ್ದ. ಆದ್ದರಿಂದ ' ಸ್ನಾನ ಇಲ್ಲ ಅಂದರೆ ಏನು ತಾಪತ್ರಯವೋ ಅಂತ ' ಓಹೋ ಆಯಿತು, ಮುಗಿಸಿಕೊಂಡೇ ಬಂದೆವು ', ಅಂತ ಇಬ್ಬರೂ ಏಕಕಂಠದಿಂದ ಸುಳ್ಳು ಬೊಂಕಿದೆವು.

" ಒಳ್ಳೇ ಕೆಲಸಮಾಡಿದಿರಿ. ಇಲ್ದೇ ಇದ್ರೂ ........ಇಲ್ಲೇ ಮಾಡಬಹುದಾಗಿತ್ತು. ಆದರೆ .....ನೀರು ಸ್ವಲ್ಪ.... ...ಅಷ್ಟು ಬಿಸಿಯಾಗಿದೆಯೋ ಇಲ್ವೋ

...........ನಮ್ಮನೇಲಿ ಯಾವಾಗಲೂ ಬಿಸಿ ನೀರು ಇರೋದು ಪದ್ಧತಿ........ಆದರೆ ಈಗ . ....ಸೌದೆಗೆ ಬಹಳ ತಾಪತ್ರಯ ನೋಡಿ,........ಆದ್ದರಿಂದ ಈಚೆಗೆ........"

" ಪರವಾ ಇಲ್ಲ, ..........ನಮ್ಮ ಸ್ನಾನವಾಗಿದೆ. ಈ ಊರೊಂದರಲ್ಲೇ ಅಲ್ಲ ಎಲ್ಲೆಲ್ಲೂ ಸೌದೆಗೆ, ಬಹಳ ಅಭಾವ, ಹಿ ಹಿ ಹಿ," ಅಂತ ನಾನು ನಾಣಿಯ ಮುಖ ನೋಡಿದೆ. ಅವನೂ ' ಹಿ ಹಿ ಹಿ ' ಅಂತ ಗುಂಡಣ್ಣೋರನ್ನು ನೋಡಿದ. ಗುಂಡಣ್ಣೋರು " ಹಿ ಹಿ ಹಿ, ಒಳ್ಳೇ ಕೆಲಸ ಮಾಡಿದಿರಿ, ಹಿ ಹಿ ಹಿ ಹಿ ; ....... ಏಳಿ ಇನ್ನು. ಊಟಕ್ಕೆ, ಕೈಕಾಲು ತೊಳೆದುಕೊಂಡು ; ಎಲೆ ಹಾಕಿದೆ " ಎಂದು ನನ್ನ ಜೊತೆಯಲ್ಲೇ ಬಚ್ಚಲು ಮನೆವರೆಗೂ ಬಂದರು , " ನಲ್ಲೀಲಿ ನೀರು ನಿಂತು ಹೋಗಿದೆಯೊ ಏನೋ !.... ........ಏನು ಕಷ್ಟ ಅಂತೀರಿ ನೀರಿಗೆ, ಈ ಹಾಳು ಊರಲ್ಲಿ ! ಇಷ್ಟು ಮಳೆ ಬರ್‍ತಾ ಇದ್ರೂ ನೀರಿಗೆ ಬಂದಿದೆ ಅಭಾವ........ಏನು ಇಲಾಖೆಯೋ ಏನೋ............ಅಲ್ಲಿ, ಆ ಪಾತ್ರೇಲಿ ನೀರು ತುಂಬಿಟ್ಟಿದ್ದೆ; ಕೊಂಚವಾಗಿ ಉಪಯೋಗಿಸಿ ಕೈ ಕಾಲು ತೊಳೆದುಕೊಂಡು ಬನ್ನಿ" ಎಂದು ಹೇಳಿ ಊಟದ ಮನೆ ಕಡೆಗೆ ಹೋದರು.

ನಾವಿಬ್ಬರೂ ' ಕೊಂಚ ' ಕೈ ಕಾಲು ತೊಳೆದುಕೊಂಡು ಬಂದು ಗುಂಡಣ್ಣೋರ ಜೊತೇಲಿ ಊಟಕ್ಕೆ ಕೂತೆವು. ಉಪಚಾರ ಪ್ರಾರಂಭವಾಯಿತು :

" ನೋಡಿದಿರಾ ಎಲೇನ, ಹಿ ಹಿ ಹಿ, ಏನು ಎಲೆಯೋ ಏನೋ ! ಈ ಎಲೇಗೆ ನೂರಕ್ಕೆ ಒಂದೂಕಾಲು ರೂಪಾಯಿ, ಹಾಳಾದ ಈ ಊರಲ್ಲಿ !........ಏನು ಹೇಳೋಣ ಹೇಳಿ. ' ವಿಸ್ತೀರ್ಣಂ ಪತ್ರಭೋಜನಂ ' ಅಂತ ಪೂರ್ವೀಕರು ಹೇಳ್ತಾ ಇದ್ರು, ಆ ಕಾಲವೆಲ್ಲಿ, ಈ ಕಾಲವೆಲ್ಲಿ !........ಸಂಕೋಚಪಡಬೇಡಿ ಎಲೆ ಚಿಕ್ಕದು ಅಂತ.... .......ಜೀವೂ, ಜೀವೂ, ಬಡಿಸಬಹುದು ಇನ್ನು, ಕೂತಿದಾರೆ ಎಲ್ರೂ.

" ಬಂದೆ " ; ಅಡಿಗೆ ಮನೆಯಿಂದಗುಂಡಣ್ಣೋರ ಕುಟುಂಬ ಜೀವೂಬಾಯಿಯವರ ಮೃದುವಾದ ಮುದಿ ದನಿ.

ಅನ್ನ ತಂದೊಡನೆ ಪುನಃ ಗುಂಡಣ್ಣೋರು ಪ್ರಾರಂಭಿಸಿದರು : " ಹಾಕಿಸಿಕೊಳ್ಳಿ,........ಸಂಕೋಚಪಡಬೇಡಿ ;............ ಬಡಿಸು ಸರಿಯಾಗಿ ............ ಹಾಳಾದ್ದು ಈ ' ರೇಷನ್ ' ಇನ್ನೂ ಎಷ್ಟುದಿನ ಇರುತ್ತೋ ? !................ತುಪ್ಪ ಬಡಿಸು............ನಿಮ್ಮೂರಲ್ಲಿ ಹ್ಯಾಗೆ ಬೆಣ್ಣೆ ?...........ಒಂದು ಸೇರು ಕೊಡ್ತಾರೆಯೆ ? ! ಪರವಾ ಇಲ್ಲ ! ಈ ಊರಿನಲ್ಲಿ ರೂಪಾಯಿಗೆ ಮೂರು ಪಾವು ಅಂತ ಹೇಳೋದು ; ಅದನ್ನು ಕಾಯಿಸಿದರೆ ಅರ್ಧಕ್ಕರ್ಧಾನೂ ಇಲ್ಲ !.... .. ನಮ್ಮನೇಗೆ ನೋಡಿ, ಮೊದಲೆಲ್ಲ ಐದುರೂಪಾಯಿಗೆ ಬೆಣ್ಣೆ ತೆಗೆದರೆ, ಓಡಾಡಿಹೋಯ್ತು ಒಂದು ತಿಂಗಳಿಗೆಲ್ಲ ! ಈಗೇನು ಅಂತೀರಿ, ವಾರಕ್ಕೂ ಬರೋದಿಲ್ಲ ! ! ಅದಕ್ಕೇ

ನಾನು ಆ ಬಾಬನ್ನೇ ಕಡಮೆಮಾಡಿದ್ದೇನೆ. ಮಕ್ಕಳಿಗೆ ಸ್ವಲ್ಪ ಹಾಕಿಬಿಡೋದು, ಒಂದು ಹೊತ್ತು ; ನಾವೆಲ್ಲ ವಾರಕ್ಕೆ ಎರಡು ಸಲ ; ಸ್ವಲ್ಪ ಖಾರ ಹೆಚ್ಚಾದಾಗ ಒಂದು ಮಿಳ್ಳೆ ತುಪ್ಪ ಹೆಚ್ಚಾಗಿ ಉಪಯೋಗಿಸೋದು,—ತುಪ್ಪ ಅನ್ನೋದು ಏನು ಅಂತ ಮರೆಯಬಾರದು ಅಂತ, ಅಷ್ಟೆ ! .. ........ಹಾಕಿಸಿಕೊಳ್ಳಿ, ಇನ್ನೂ ಕೊಂಚ, ಸಂಕೋಚಪಡಬೇಡಿ............ಹುಳೀ ಬಡಿಸು.... .. ....ಆಲೂಗೆಡ್ಡೆ ಬದನೇಕಾಯಿ ಹುಳಿ, ಬಹಳ ಚೆನ್ನಾಗಿದೆ ; ..........ಬಡಿಸು ಧಾರಾಳವಾಗಿ – ನಿಮ್ಮತ್ತೆ, ಜೀವೂ, ಮನಸ್ಸುಮಾಡಿದರೆ, ಪಾಕ ನಳಪಾಕ ! ನೀವು ಬರ್ತೀರಿ ಅಂತ ಬಹಳ ವಿಶ್ವಾಸ ದಿಂದ ಮಾಡಿದಾಳೆ .... .. ಬಹಳ ದಿನಗಳಾಗಿತ್ತು ಇಂಥಾ ಹುಳಿ ತಿಂದು ನಾನು. . . .. ನಿಜವಾಗ್ಲು ನಾಣಿ, ಈ ಕಾಲದಲ್ಲಿ ದಿನಾ ಹೀಗೆ ಊಟಮಾಡೋಕೆ ಸಾಧ್ಯವೆ ? ನೀವು ಹೇಳಿ ರಾಮಚಂದ್ರರಾಯರೆ........ಒಂದಾಣೇಗೆ ಒಂದು ವೀಸೆ ಬದನೇಕಾಯಿ ಬರ್ತಿತ್ತು ; ಎರಡಾಣೇಗೆ ಒಂದು ವೀಸೆ ಆಲೂಗೆಡ್ಡೆ ! ಈಗ ? ಒಂದಕ್ಕೆ ಎಂಟ ರಷ್ಟು, ಹತ್ತರಷ್ಟು ! ಏನು ತರಕಾರಿ ತರೋದು, ಏನು ತಿನ್ನೋದು ! ; ಎಲ್ಲಿ ಸಾಧ್ಯ ಸ್ವಾಮಿ ! ಆದಕ್ಕೇ ನಮ್ಮನೇಲಿ ತರ್ಕಾರಿಯೇ ವಜಾ ...... ... ... ....... ಇನ್ನೂ ಸ್ವಲ್ಪ ಹಾಕಿಸಿಕೊಳ್ಳಿ ; ಹುಳಿ ಚೆನ್ನಾಗಿದೆ–ಸಾಕು ಅನ್ಬೇಡಿ. ಸಂಕೋಚ ಯಾಕೆ ಸ್ವಾಮಿ ? ..........ಜೀವೂ, ಜೀವೂ, ಸ್ವಲ್ಪ ತುಪ್ಪ ತಕ್ಕೊಂಡು ಬಾ.... ........ತುಪ್ಪ ಬೇಡವೇ ನಾಣಿ ! ರಾಯರೇ ನಿಮಗೆ ?....... ಯಾಕೆ ವಾಸನೆಯೋ ? ............ಹಿ ಹಿ ಹಿ, ಅಂಗಡಿ ತುಪ್ಪ, ... .. ಬಹಳ ಮೋಸ ! ಇರೋ ರುಚೀನ್ನೂ ಕೆಡಿಸಿ ಬಿಡುತ್ತೆ '.... ... ಜೀವೂ, ತುಪ್ಪ ವಾಸನೆ ; ಬೇಡ ಬಿಡು. ಸಾರು ಬಡಿಸು.... . ....ಅನ್ನ ಹಾಕಿಸಿಕೊಳ್ಳಯ್ಯ. ನೀವು, ರಾಮಚಂದ್ರರಾಯರೆ, ಯಾಕೆ ಸಂಕೋಚ ? ....ಏನಯ್ಯ ನಾಣಿ, ತಿಳೀ ಸಾರು ಮಾಡಿಸಿದ್ದೇನೆ ; ನಿನಗೆ ಇಷ್ಟತಾನೆ ? ಒಳ್ಳೆ ಕೊತ್ತುಂಬರಿ ಸೊಪ್ಪು ಹಾಕಿಸಿ ಜೀರಿಗೆ ಒಗ್ಗರಣೆ ಹಾಕಿಸಿ ದ್ದೇನೆ ಸುವಾಸನೆಯಾಗಿ ಬಹಾಳ ಚೆನ್ನಾಗಿರುತ್ತೆ ! ಜೀರ್ಣಕಾರಿ, ಮೈಗೆ ಬಹಳ ಒಳ್ಳೇದು ; ರಾಮಚಂದ್ರರಾಯರೆ, ನಿಮಗೂ ಇಷ್ಟತಾನೆ ?....... ಹಾಕಿಸಿಕೊಳ್ಳಿ, .......ಇನ್ನೂ ಸ್ವಲ್ಪ ಹಾಕಿಸಿಕೊಳ್ಳಿ.........ಜೀವೂ, ಒಂದೆರಡು ಬಟ್ಲು ಕೊಡು ಅವರಿಬ್ಬರಿಗೂ, ತಿಳೀಸಾರು ಕುಡಿಯೋಕೆ. ಬೇಳೆ ಸಾರಿಗಿಂತ ಬಹಳ ಒಳ್ಳೇ ದಯ್ಯ ನಾಣಿ, ಮೈಗೆ... ....ಬೇಡ ಅನ್ನಬೇಡ.........ಹೊಟ್ಟೆ ತುಂಬಿತೆ ಆಗಲೆ ! ? ಏನೂ ತಿನ್ನಲೇ ಇಲ್ಲವಲ್ಲಯ್ಯ !............ನಿನ್ನ ಸ್ನೇಹಿತರಂತೂ, ಬಹಳ ಸಂಕೋ ಚಪ್ಪ !.... ......ಬೇಳೆ ಅಂದ್ರೆ ಜ್ಞಾಪಕಕ್ಕೆ ಬಂತು ; ನಾವು ಊಟಕ್ಕೆ ಉಪ ಯೋಗಿಸೋ ವಸ್ತುಗಳಲ್ಲಿ ಬೇಳೆ ಬಹಳ ಮುಖ್ಯ ಪದಾರ್ಥ ! ಪೂರ್ವೀಕರು ಯಾಕೆ ಮತ್ತೆ ಅಷ್ಟು ಆರೋಗ ದೃಢಕಾಯರಾಗಿದ್ದರು ? ಪ್ರತಿನಿತ್ಯವೂ ಒಬ್ಬ ಮನುಷ್ಯನಿಗೆ, ಒಂದು ಹೊತ್ತಿಗೆ, ಕನಿಷ್ಟಪಕ್ಷ ಒಂದು ಅರಪಾವು ಬೇಳೆಯಾದ್ರೂ ಉಪಯೋಗಿಸ್ತಾ ಇದ್ರು. ಈಗೆಲ್ಲಿಂದಯ್ಯ ತರೋದು, ಬೇಳೀನ ? ನಮ್ಮನೇ

ಸಂಸಾರಕ್ಕೆ ಒಂದು ದಿನಕ್ಕೆ ಆರಪಾವು ಬೇಳೆ ಹಾಕೋದೂ ಬಹಳ ಪ್ರಯಾಸವಾಗಿದೆ ..... ...ಒಂದೂವರೆ ರೂಪಾಯೀ, ಬೇಳೆ, ಒಂದು ಸೇರಿಗೆ ! ? ಹ್ಯಾಗಯ್ಯ ತಿಂದು ಬದುಕೋದು !........ .. ನಿಮ್ಮೂರಲ್ಲೂ ಇದೇ ಧಾರಣೆ ಅಂತ ತೋರುತ್ತೆ......... ... ಕಾಲಸ್ಥಿತಿ ಹ್ಯಾಗಾಯ್ತು ನೋಡಿದೆಯಾ ! . ....... ಆಯಿತೇ, ತಿಳೀಸಾರು ಕುಡಿ ದಿರಾ........? ಹ್ಯಾಗಿದೆ ? ... .. ನಾನು ಹೇಳಲಿಲ್ಲವೆ, ಚೆನ್ನಾಗಿರುತ್ತೆ ಅಂತ .. .... ವೈಗೆ ಬಹಳ ಒಳ್ಳೇದು.... ....ಜೀವೂ, ಅನ್ನ ಬಡಿಸು, ಮಜ್ಜಿಗೇಗೆ........ಅಂದ ಹಾಗೆ ಔತಣ ಗಿವ್‌ತಣ ಏನೂ ಇಲ್ಲಯ್ಯ, ನಾಣಿ; ಏನೋ ಸಾಧಾರಣ ಊಟ.... ... ಏನಾದ್ರೂ ಮಾಡಿಸಬಹುದಾಗಿತ್ತು; .. ....ಆದರೆ ನಮ್ಮವಳಿಗೆ ಮೈಯಲ್ಲಿ ಸ್ವಸ್ಥ ವಿಲ್ಲ. ನಾನೇ ಬೇಡ ಅಂದೆ........ ...ಮುಖ್ಯ ವಿಶ್ವಾಸ ಇದ್ರೆ ಸರಿ, ಲಾಡು ಚಿರೋ ಟೇನೇ ಬೇಕೆ ? ! ಏನು ರಾಮಚಂದ್ರರಾಯರೆ ? ..........ನಿಮಗೆ ನಮ್ಮ ನಾಣಿ ಸ್ವಭಾವ ಚೆನ್ನಾಗಿ ಗೊತ್ತಿದೆಯಲ್ಲ; ಅವನು ಇದೊಂದೂ ಮನಸ್ಸಿಗೆ ಹಚ್ಚಿಕೊ ಳ್ಳೋದೇ ಇಲ್ಲ. ಬಹಳ ಒಳ್ಳೇ ಹುಡುಗ – ನಾವು ಅಂದ್ರೆ ಬಹಳ ವಿಶ್ವಾಸ ..... ........ಜೀವೂ, ಮಜ್ಜಿಗೆ ಬಡಿಸು .......ಏನು ಬಹಳ ನೀರಾಗಿದೆಯಲ್ಲ ...... ಸ್ವಲ್ಪ ಹುಳಿ ವಾಸನೆ ಅಲ್ವೆ, ರಾಯರೆ ?........ಕೊತ್ತುಂಬರಿ ಕರಿಬೇವೂ ಹಾಕಿದೆ. ಇನ್ನು ಸ್ವಲ್ಪ ಉಪ್ಪು ಹಾಕಬೇಕು. ಇಂಗು ಹಾಕಿದರೆ ವಾಸಿ .. . .....ಜೀವೂ, ಸ್ವಲ್ಪ ಉಪ್ಪಿನಕಾಯಿ, ಇದ್ರೆ, ಬಡಿಸು .......... ತೆಗೀಲಿಲ್ಲವೆ ? ಹೋಗಲಿ ಬಿಡು.... ... ಹುಳಿ ಸ್ವಲ್ಪ, ಇದ್ರೆ, ಬಡಿಸು ನಂಜಿಕೊಳ್ಳೋಕೆ.... .......ನೋಡಯ್ಯ, ಇದನ್ನು ಮಜ್ಜಿಗೆ ಅಂತ ಹ್ಯಾಗಯ್ಯ ಕರೆಯೋದು ? ಬರೀ ಬಡನೀರು ! ಇದಕ್ಕೇ ಎಷ್ಟು ತಾಪತ್ರಯ ಅಂತೀಯೆ, ಈ ಹಾಳೂರಲ್ಲಿ ! ಹಾಲು, ಮೊಸರು ಅನ್ನೋದು ಸ್ವಪ್ನ ಪ್ರಾಯ ! !........ನಮ್ಮಂಥಾವರು ಅವನ್ನು ಉಪಯೋಗಿಸಿ ಸಂಸಾರ ನಡಿಸೋದು ಬಹಳ ಪ್ರಯಾಸ. ಅದರಲ್ಲೂ ಕಾಫಿ ಗೀಫಿ ಅಭ್ಯಾಸ ಇಟ್ಟುಕೊಂಡರೆ ಬದುಕಿದ ಹಾಗೇ ಆಯ್ತು ! ಅದಕ್ಕೇ ನಮ್ಮನೇಲಿ ಅವುಗಳ ಹವ್ಯಾಸವೇ ಇಲ್ಲ. ಅದರಿಂದ ನಮಗೇನೂ ತೊಂದರೆಯೂ ಆಗಿಲ್ಲ. ಹಾಳು ದುರಭ್ಯಾಸಗಳಿಲ್ಲದೆ ನಾವೆಲ್ಲ ಬಹಳ ಆರೋಗ್ಯವಾಗಿದೇವೆ ...... .. ಇದೇನಯ್ಯ ಇಷ್ಟುಬೇಗ ಊಟ ಮುಗಿಸಿಬಿಟ್ಟಿರಿ ! ? ಬಹಳ ಸಂಕೋಚ ಅಂತ ಕಾಣುತ್ತೆ. ನೀನೇನೋ ನಮ್ಮ ಹುಡುಗ; ನಿನಗೆ ನಾನು ಉಪಚಾರ ಹೇಳಬೇಕೆ !........ನಿನ್ನ ಸ್ನೇಹಿತರು, ರಾಮಚಂದ್ರರಾಯರು ಏನೂ ಊಟವೇ ಮಾಡಿದ ಹಾಗೇ ಇಲ್ಲವಲ್ಲ ! ಏನು ರಾಯರೇ, ಯಾಕೆ ಇಷ್ಟು ಸಂಕೋಚ ?.... ... ...ಹಿ ಹಿ ಹಿ ಹಿ, 'ಏಳಿ, ಕೈತೊಳಕೊಳ್ಳೋಣ,........ಇರಲಿ ಇರಲಿ, ಎಲೆ ಹಾಗೇ ಇರಲಿ, ಛೇ ಛೇ, ಉಂಟೇ ನೀವು ಎತ್ತಬಾರದು ಎಲೇನ, ಬಿಡಿ ! !.... .. ....ಅಲ್ಲಿ ಸೀಗೇಕಾಯಿ ಇರಬೇಕು, ಸ್ವಲ್ಪ ಉಪಯೋಗಿಸಿ, ಕೈ ತೊಳಕೊಳ್ಳೋಕೆ''.

ನಾನು "ಜಿಡ್ಡೇನೂ ಆಗಿಲ್ಲ ಕೈಯಿ".

ನಾಣಿ, ಎಲ್ಲರೂ, " ಹಿ ಹಿ ಹಿ ಹಿ ಹಿ........"

(...........ಅಲ್ಪ ವಿರಾಮ.............)

ಮತ್ತೆ ಗುಂಡಣ್ಣೋರ ಉಪಚಾರ :—

" ಬನ್ನಿ, ಕೂಡಿ ಹೀಗೆ........ಏನು ರಾಯರೆ ನಮ್ಮನೇ ಊಟ ನಿಮಗೆ ಹಿಡಿಸಿತೋ ಇಲ್ವೋ .......ಹಿ ಹಿ ಹಿ. ಹೆಚ್ಚಾಗಿ ಏನೂ ಮಾಡಿಸೋಕೆ ಆಗಲಿಲ್ಲ. ಬಡವರ ಮನೇ ಊಟ !........ಬಡವರೇನು, ಭಾಗ್ಯವಂತರೇನು, ಎಲ್ಲರಪಾಡೂ ಒಂದೇ ಆಗಿದೆ ನೋಡಿ, ಹಿ ಹಿ ಹಿ, ಹಾಳಾದ ಈ ಕಾಲ ; ಏನು ಹೇಳೋಣ ! ...........ಅದೇ ನಾನು ಲೋಕಾಭಿರಾಮವಾಗಿ ಹೇಳ್ತಾ ಇದ್ದ ಹಾಗೆ, ತಿನ್ನೋ ಅನ್ನಕ್ಕೇ ಎಷ್ಟು ಪರದಾಟ ಅಂತೀರಿ, ಈಗ ! ?.........ನೋಡಿ, ಈವತ್ತು ಉಪ ಯೋಗಿಸಿದ ಅಕ್ಕಿ, ಅನ್ನ ಮಾಡಿದ್ದು ಎಷ್ಟು ಚೆನ್ನಾಗಿತ್ತು ; ನೀವು ಬರ್‍ತೀರಿ ಅಂತ ಪಕ್ಕದ ಮನೇ ಶಿರಸ್ತಾರ್ ಸುಬ್ಬರಾಯರನ್ನು ಅಂಗಲಾಚಿ ಅಚ್ಚೇರು ಅಕ್ಕಿ ತಂದೆ. ನಾಳೆ ವಾಪಸು ಕೊಡಬೇಕು ಅವರಿಗೆ. ಆದರೆ ಇಂಥಾ ಸಣ್ಣಕ್ಕಿ ನಾನೆಲ್ಲಿಂದ ತರಲಿ ? ನನಗೆ ಕೊಡೋ ರೇಷನ್ ದಪ್ಪಕ್ಕಿ ಮೂರುಪಾವು ಕೊಡ್ತೇನೆ ಅಂತ ಒಪ್ಪಿಕೊಂಡು ಅಚ್ಚೇರು ಸಣ್ಣಕ್ಕಿ ತಂದೆ. ಮೂರು ಪಾವು ಅಕ್ಕಿ ಹೋದರೆ, ನಮ್ಮನೇಲಿ ಒಪ್ಪೊತ್ತು ಒಲೇ ಹಚ್ಚೋ ಹಾಗಿಲ್ಲ ! ಏನುಮಾಡೋದು,...........ಹ್ಯಾಗೋ ಆಗುತ್ತೆ........"

" ನಾವು ಬರ್‍ತೇವೆ. "

" ಅಂತು ವಿಶ್ವಾಸವಿಟ್ಟು ಬಂದ್ರಲ್ಲ. ಅಭಿಮಾನ ಮುಖ್ಯ ನೋಡಿ – ಹೊತ್ತಾಯ್ತು ಏನೂ ತಿಳುಕೋ ಬೇಡಿ.... .. ಕಾಲಸ್ಥಿತಿ ಹೇಳಿದೆ....... ರಾಯರೆ, ಲವಂಗ ಇದೆಯೆ ? ಒಂದು ಕೊಡಿ ಸಾಕು ... .. ನೆನ್ನೆ ಮಾರ್ಕೆಟ್ಟಿಗೆ ಹೋದವನು ಅಡಿಕೆ ಎಲೆ ಎಲ್ಲಾ ತರೋಣ ಅಂತ ಅಂದ್ಕೊಂಡಿದ್ದೆ. ಹಾಳಾದ್ದು ತರಕಾರಿ ತರೋ ಗಲಾಟೇಲಿ ಎಲ್ಲ ಮರೆತು ಹೋಗಿ ಹಾಗೇ ಬಂದುಬಿಟ್ಟೆ ... ಮರವು ಏನು ಮಾಡೋದು ಹೇಳಿ, ವಯಸ್ಸು ! ಹಿ ಹಿ ಹಿ ಹಿ ; ಊಟ ಆದಮೇಲೆ ಎಲೆ ಅಡಿಕೆ ಇಲ್ದೆ ಒಂದು ದಿನವೂ ಇರಲಿಲ್ಲ ನಮ್ಮನೇಲಿ, ಇದುವರೆಗೂ. ಆದರೆ ಈಚೆಗೆ ನನಗೆ ಸ್ವಲ್ಪ ಹಲ್ಲಿನ ತಾಪತ್ರಯ ; ನಮ್ಮವಳಿಗೂ ವಯಸ್ಸಾಯಿತು, ಎದೇಲಿ ಸೊಕ್ಕು ಹಿಡಿದುಬಿಡುತ್ತೆ ಒಳ್ಳೆ ಅಡಿಕೆ ಇಲ್ದೇ ಇದ್ರೆ.... .. ಎಲ್ಲಿ ಸಿಕ್ಕುತ್ತೆ ಹೇಳಿ, ಆಗ ಬರ್‍ತಾ ಇತ್ತಲ್ಲ ಅಂಥಾ ಅಡಿಕೆ, ಈಗ !.... ...ಅಲ್ಲದೆ, ಎರಡು ಕಾಸಿಗೆ ಒಂದೆಲೆಯೆ ! ರಾಮರಾಮ, ಪೂರೈಸೋದು ಹ್ಯಾಗೆ ಹೇಳಿ.........ಅದಕ್ಕೇ ನಮ್ಮ ನೇಲಿ ಈಗ ಅದೆಲ್ಲ ವರ್ಜ....... ಏನೂ ತಿಳಕೋಬೇಡಿ ; ಹೇಳ್ದೆ, ಕಾಲಸ್ಥಿತಿ ".

## " ಬರ್ತೀವೆ "

" ಹೋಗಿ ಬರ್ತೀರಾ ?......!.ಬಹಾಳ ಸಂತೋಷ .. ....ಏನಪ್ಪ ನಾಣಿ, ಪುನಃ ಯಾವಾಗ ಬರ್ತಿ ಈ ಕಡೆ ? ಬಂದಾಗ ಮರೆಯದೆ ಬಾಪ್ಪ.; ರಾಯರನ್ನೂ ಕರೆದುಕೊಂಡು ಬಾ.......ಒಳ್ಳೇದಪ್ಪ, ಹೋಗಿ ಬನ್ನಿ ;..........ಬಹಳ ಸಂತೋಷ, ಬಹ........ ..................."

" ನಮಸ್ಕಾರ ", ಗುಂಡಣ್ಣೋರಿಗೆ ಕಣ್ಣುಮುಚ್ಚಿಕೊಂಡು ಕೈಮುಗಿದು ಹೊಸಲು ದಾಟಿದೆ. ' ಬದುಕಿದೆ ' ಅಂದುಕೊಂಡೆ ! ನಾಣಿ ಮುಖ ನೋಡಿದೆ,— ಪಾಪ ! " ಅಯ್ಯಾ ನಾಣಿ, ಯಾವುದಾದರೂ ಹೋಟಲು ತೆಗೆದಿರುತ್ತೇನಯ್ಯ ಈಗ ?........ನಿಜವಾಗಿ ಹೇಳ್ತೀನೆ,— ಕೋಪಿಸಿಕೋಬೇಡ,— ಈವತ್ತಿನ ಊಟ ಉಪಚಾರ, ಮರೆಯೋ ಹಾಗೇ ಇಲ್ಲಾಪ್ಪ ! ಎಂದೆಂದಿಗೂ ಮರೆಯೋದಿಲ್ಲ ನಾನು ........ಏನು ಊಟ,........ಏನು ಉಪಚಾರ ! ಕೇಳ್ತಾ ಕೇಳ್ತಾ ನರಕಯಾತನೆ ! ಅನ್ನವೇ ಇಳೀಲಿಲ್ಲ. ನನ್ನ ಸ್ಥಿತಿ ಈಗ ಏನಾಗಿದೆ ಅಂತೀಯೋ, ಹೊಟ್ಟೇಲಿ ಹಸಿವೊಂದು ಕಡೆ, ತಲೆನೋವು ಒಂದುಕಡೆ, ನನ್ನ ಪಾಡು ಹೀಗಾಯ್ತಲ್ಲಾ ಅಂತ ಸಂಕಟವಾಗ್ತಾ ಇದೇಯ್ಯ .... ನಿನ್ನ ಸೋದರಮಾವ ಹೇಳಿದ ಹಾಗೆ, ನಾನು ಹೀಗೆ ಹೇಳ್ತೀನೆ ಅಂತ ನೀನು ಏನೂ ತಿಳುಕೋ ಬೇಡ ; ಹೇಳ್ದೆ ಅಷ್ಟೆ, ಇರೋ ಸ್ಥಿತೀನ !

—ಬುಳ್ಳ.

—o—

" ಜನರೆಂಬರು : ಹಿಡಿಬೂದಿಯು ಹುಯ್ದುಕೊ ನೀ ಪೆದ್ದೆ !
ಶಿವತನುವನೆ ಮುಚ್ಚುವ ನಾನೀ ಗತಿಗೂ ಬಿದ್ದೆ.
ಇದು ಸಾಲದು ಎಂಬೊಲು ಕಾಣಿಸುವರು ಗೊಬ್ಬರವ "
ಎನ್ನುತ ಬೂದಿಯು ಗೈಯುತಲಿದ್ದಿತು ಅಬ್ಬರವ !

* * * *

" ಏನೊ ಪಾಪ ! ಕುತೂಹಲವು ಇಣಿಕಿ ನೋಡಲೆನ್ನುತ
ಸಲಿಗೆಕೊಟ್ಟೆ ನಿನಗೆ ನಾನು ! ನೀನು ಒಬ್ಬ ಸನ್ನುತ
ಎಂದಿರಲು ನನ್ನನೆಣಿಸುವಷ್ಟು ನೀನು ಕೊಬ್ಬಿದೆ "
ಎಂದು ಮೂಗ ಬೈವ ತೆರದಿ ಅವನ ಹಲ್ಲು ಉಬ್ಬಿದೆ !

—ಕಚಕುಳಿ.



ಸ್ವಾಮೀ ! ಕನ್ನಡಿಗರಿಗೆ ಹಾಸ್ಯಾಭಿರುಚಿ ಇದೆಯೇ ಇಲ್ಲವೇ ಎಂದು 'ರೆಫರೆಂಡಂ' ತೆಗೆದುಕೊಳ್ಳಲು ಬಂದಿದ್ದೇನೆ

---





ಆಗ. ಈಗ.

ಬೇಳೆ ಮಂಡೀ, ಅಮಾವಾಸ್ಯೆ ರಾತ್ರಿ, ಇಲಿಗಳ "ಕಿಚಿ—ಕಿಚಿ" ಕೇಳಿ ಬಂದ ಸ್ಥಳ.

# ಇನ್ನು ಮುಂದೆ

ಅಗಸ್ಟ್ 15ನೇ ತಾ||, ಇಂಗ್ಲೀಷಿನವರಿಗೆ ಇಂಗ್ಲಂಡಿನಲ್ಲಿರುವಷ್ಟು ಸ್ವಾತಂತ್ರ್ಯ ನಮಗೂ ದೊರೆತಮೇಲೆ, ನಾವೂ ಕೂಡ, ಇಂಗ್ಲಿಷಿನವರ ಹಾಗೆ ನಮ್ಮ ತಾಯ್ನುಡಿಗೆ ಮನ್ನಣೆ ಕೊಡಬೇಕಾದ ಟೈಂ ಬಂತು ಎಂಬುದು ಸರಿಯಷ್ಟೆ! ಅಂದಿನಿಂದ ಕನ್ನಡನಾಡಿನಲ್ಲಿ ಎಲ್ಲೆಲ್ಲೂ ಇಂಗ್ಲೀಷ್ ಬೋರ್ಡುಗಳಿರಕೂಡದು. ಕನ್ನಡ ಬೋರ್ಡುಗಳೇ ಕಂಗೊಳಿಸಬೇಕು. ಬಸ್ಸಿನವರು ಯಾರೂ ಹೋಲ್ಡಾನೆಂದಾಗಲಿ ರೈಟ್ ಎಂದಾಗಲಿ ಹೇಳಬಾರದು. ಓವರಾಯಿಲ್ ರಿಪೇರಿ ಕಿಳೀನ್ ಇಷ್ಟಾರ್ಟ್ ಮುಂತಾದವು ಯಾವುದನ್ನೂ ಮಾಡದೆ ಲೈನ್‌ಮೇಲೆ ಬಸ್ಸುಗಳು ಓಡಾಡಬೇಕು. ಕನ್ನಡದವರ ಹೆಸರಿನ ಹಳ್ಳಿಗಳು ಇಂಗ್ಲೆಂಡಿನಲ್ಲಿ ಒಂದೂ ಇಲ್ಲವಾದ್ದರಿಂದ ನಮ್ಮಲ್ಲಿರುವ ಕ್ಲೋಸ್‌ಪೇಟೆ, ಬ್ಲಾಕ್‌ಮಾರ್ಕೆಟ್, ವೈಟ್‌ಫೀಲ್ಡ್, ಬೌರಿಂಗ್‌ಪೇಟೆ, ಕೆ. ಜಿ. ಎಫ್, ಮನ್‌ರೊಪಾಳಯ, ಹುಚ್ಚಿನ್‌ಸನ್‌ಪೇಟೆ, ಹೆಂಡರ್‌ಸನ್ ನಗರ್, ಡಾಬ್ಸ್‌ಪೇಟೆ ಮುಂತಾದುವುಗಳ ಹೆಸರುಗಳನ್ನೆಲ್ಲ ಬದಲಾಯಿಸಬೇಕಾಗುತ್ತದೆ. ಬುಕ್ಕು, ಕುಕ್ಕು, ಹುಕ್ಕು, ಲಕ್ಕುಗಳನ್ನೆಲ್ಲ ಒತ್ತಟ್ಟಿಗಿಡಲೇಬೇಕು. A C., D C, C C, V. C, T. T C., A T. S, D T. S., S M., A. S M., P. M G., D F O, D E. O, ಮುಂತಾದ ಅಧಿಕಾರಿನಾಮಗಳನ್ನೆಲ್ಲ ತೊಡೆದು ಹಾಕಲೇಬೇಕು. ಸರ್ಕಾರಿ ವ್ಯವಹಾರಗಳಲ್ಲಿ ಆದಷ್ಟು ಕ್ವಿಕ್ಕಾಗಿ ನಾವು ಕನ್ನಡವನ್ನೇ ಯೂಸ್‌ಮಾಡಬೇಕು. ಟೆಲಿಫೋನ್‌ನಲ್ಲಿ ಮಾತನಾಡುವವರು ಹೆಲ್ಲೊ ಎಂಬ ಆಂಗ್ಲಪದವನ್ನುಪಯೋಗಿಸಿ ಸಂಭಾಷಣೆ ಬಿಗಿನ್‌ಮಾಡುವುದು ಇನ್ನು ಮುಂದೆ ಶುದ್ಧ ತಪ್ಪು. ಬ್ರಷ್ಷು, ವಾಚು, ಪೇಸ್ಟು, ಸೋಪು, ಬ್ಲೇಡುಗಳನ್ನೆಲ್ಲ ಬಿಟ್ಟುಬಿಡಬೇಕಾಗುತ್ತದೆ. ಡಾಡಿ ಮಮ್ಮಿ ಪಪ್ಪಿ ಟಾಮಿ ಬೇಬಿ ಸಿಸ್ಟರು ಡಸ್ಟರು ಎಂಬ ಪದಗಳಿಗೆ ನಮ್ಮ ಗಂಟಲುಗಳಲ್ಲೆಡೆಯಿಲ್ಲ. ಕನ್ನಡ ಕವಿಗಳನ್ನು ಸೋಲಾಪುರದ ಷೆಲ್ಲಿ, ಬೆಂಗಳೂರು ಬೈರನ್, ಗೆವಿಪುರದ ಗಯಟೆ, ಮಂಗಳೂರು ಮಿಲ್‌ಟನ್, ಕುಪ್ಪಳ್ಳಿ ಕೀಟ್ಸ್ ಎಂದು ಒಬ್ಬರೂ ತೆಗಳುವಂತಿಲ್ಲ. ಇನ್ನು ನಾವು ಲಾಟರಿ ಹೊಡೆಯುವಂತಿಲ್ಲ; ರೈಲು ಬಿಡುವಂತಿಲ್ಲ; ಎಮ್ಮೊ, ಟೀ ಎಮ್ಮೊಗಳನ್ನು ರವಾನಿಸುವಂತಿಲ್ಲ; ಚೆಕ್ಕು ಕ್ಯಾಷು ಮಾಡುವುದೂ ದೇಶದ್ರೋಹ; ಕಾರ್ಡು ಬರೆಯುವುದು ಕಷ್ಟ; ಏಕೆ, ರುಚಿಯಾದ ಲೇಡೀಸ್ ಫಿಂಗರುಗಳನ್ನು ತಿಂಬುವಂತಿಲ್ಲ ವೆಡ್ಡಿಂಗ್ ಉಂಗುರದ ಮೇಲೆ ಇಂಗ್ಲೀಷಕ್ಷರ ಕೂಡದು. ನಾವು ತಿಂಬ ಆಹಾರದಲ್ಲಿರುವ ಸೂಕ್ಷ್ಮ ತತ್ವಗಳಿಗೆಲ್ಲ ಪರಂಗಿಯವರು A, B C D, ಎಂಬ ತಮ್ಮ ಅಕ್ಷರಗಳನ್ನೇ ಜೋಡಿಸಿಬಿಟ್ಟಿದಾರೆ. ನಾವು ಕಲಿಯುವ ಗಣಿತಶಾಸ್ತ್ರದಲ್ಲೂ A B C, X Y Z ತುಂಬಿವೆ;

ಪೀನಲ್‌ಕೋಡಲ್ಲೂ A. B. C ಗಳೇ. A B ಕಲಿತು B A ಆಗುವವರೆಗೂ ನಮ್ಮ ವಿದ್ಯೆ ಎಲ್ಲ ಇಂಗ್ಲೀಷ್ ಅಕ್ಷರಮಾಲೆ. ಆದರೆ, 15ನೇ ತಾ॥ ನಿಂದ ನಮಗೆ ನಾವೇ! ನಮ್ಮ ಕನ್ನಡವೇ ನಮ್ಮ ನುಡಿ. ನಮ್ಮ ಕ ಖ ಗ ಘಗಳೇ ನಮಗೆ ಗತಿ. ಪೇಪರುಗಳಲ್ಲೂ, ಕನವರಿಸೇಷನ್ನುಗಳಲ್ಲೂ ಸ್ಪೀಚುಗಳಲ್ಲೂ ನಾವಲ್ಲು ಗಳಲ್ಲೂ ಸ್ಟೇಜಿನಮೇಲೂ ಆಗಾಗ ಇಂಗ್ಲಿಷ್ ಮಾತುಗಳನ್ನು ಲಂಗು ಲಗಾಮು ಗಳಿಲ್ಲದೆ ಪ್ರಯೋಗಿಸುವ ಎಲ್ಲ ಕನ್ನಡಿಗರಿಗೂ ಇನ್ನು ಧಿಕ್ಕಾರವಿರಲಿ! ಎಲ್ಲ ಕಡೆ ಯಿಂದಲೂ, ಇಂಗ್ಲೀಷು ಕಂಪ್ಲೀಟಾಗಿ ತೊಲಗಲಿ. ಹಿಪ್ ಹಿಪ್ ಹೂ ಊ ಊ ರೇ! ಇದೇ ಈ ವೀರಕನ್ನಡಿಗನ ಕೂಗು!

—0—



‘ ನವಭಾರತ ಕಲ್ಪದ್ರುಮ ’

# ಸರ್ವಜ್ಞ (?)

---

ಬಲವಂತದೈಕ್ಯದಿಂ ಭಾಗವೇ ಬಲುಲೇಸು
ಭಂಗಪಟ್ಟುಂಬುವ ಬಿಸಿಗಿಂತ । ನಮ್ಮವರ
ತಂಗಳೇ ಲೇಸು, ಸರ್ವಜ್ಞ.

ಕನ್ನಡದ ಈನಾಡು ಭಿನ್ನವಾಗಿದೆ, ನೋಡು ;
ಅನ್ಯರಿದನೊಡೆದರೆನಬೇಡ । ಇದ ಮತ್ತೆ
ಚೆನ್ನ ಕೂಡಿಸಬೇಕು, ಸರ್ವಜ್ಞ.

ಕಾಡದೇ ಕೊಟ್ಟದ್ದು–ಸಿಂಧು, ಬಹಳುತ್ತಮವು ;
ಕಡಿದು ಕೊಟ್ಟದ್ದು ಮಧ್ಯಮವಧಮತಾ
ರೆಫರೆಂಡದ್ದು, ಸರ್ವಜ್ಞ.

ಕೆಚ್ಚೆದೆಯ ಜನವಾಗಿ, ಹಚ್ಚನೆಯ ನೆಲವಾಗಿ,
ಮೆಚ್ಚಿದ್ದ ಕೊಡುವ ದೊರೆಯಾಗೆ, ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ, ಸರ್ವಜ್ಞ.

ಆ ದೇಶ ಈ ದೇಶ ಮಾದೇಶ ಎನಬೇಡ ;
ಆದೇಶ ತಿಳಿದವನು । ಭುವನವನೆ
ಮಾದೇಶವೆಂಬ, ಸರ್ವಜ್ಞ.

ನೆಲವಿಲ್ಲ, ಮನೆ ಇಲ್ಲ, ದಾಹದಲಿ ಹರಿಜನಗೆ
ಜಲವಿಲ್ಲ ! ಮೊರೆಯಿಡಲು, ಮೈಸೂರ
ದೇಗುಲವೆ ಇಲ್ಲ, ಸರ್ವಜ್ಞ.

—o—

# ವಾಯು

ಕಿಟಿಕಿ ಕಂಬಿ ಬಗ್ಗಿಸಿ ತಸ್ಕರ ಮೆಲ್ಲಗೆ ಒಳಕ್ಕಿಳಿದ. ಟಾರ್ಚನ್ನು ಬೆಳಗಿಸಿ ಸುತ್ತ ತಿರುಗಿಸಿದ. ಮಂಚದಮೇಲೆ ದೊಡ್ಡ ಮನುಷ್ಯ ಗಾಢ ನಿದ್ರೆಯಲ್ಲಿದ್ದ. ಮೇಜಿನಮೇಲೆ ಪರ್ಸು, ಚಿನ್ನದ ಸರಪಣಿ ಸಹಿತ ಕೈಗಡಿಯಾರ, ಬೀಗದಕೈ ಗೊಂಚಲು, ಆಸ್ಪಿರಿನ್ ಡಬ್ಬಿ, ಭಗವದ್ಗೀತೆ, 'ಮನವಾಣಿ' ಪೇಪರು ..........

ಒಂದು ...ಎರಡು ಮೂರು.... ...ಮೇಜಿನ ಸಮೀಪಕ್ಕೆ ಮೂರು ಹೆಜ್ಜೆಗಳನ್ನಿಟ್ಟ. ಹಾಸಿಗೆ ಮೇಲೆ ಬಿದ್ದಿದ್ದ ದೊಡ್ಡ ಮನುಷ್ಯ 'ಯಾರು?' ಎಂದು ಕೇಳುತ್ತ, ಸ್ವಿಚ್ ಹಾಕಿದ. ತಸ್ಕರನ ಕೈಲಿದ್ದ ಕಬ್ಬಿಣದ ಹಾರೆಯನ್ನು ಅವನು ಮೇಲೆತ್ತಿದ. 'ಮಾತಾಡಬೇಡ' ಎಂದು ಅವನು ತಗ್ಗು ಶ್ರುತಿಯಲ್ಲಿ ಆಜ್ಞಾಪಿಸಿದ 'ಹಾಗೆಯೇ ಮಲಗಿರು' ಎಂದ. 'ಎರಡು ಕೈಗಳನ್ನೂ ಮೇಲಕ್ಕೆತ್ತಿ ಹಿಡಿ' ಎಂದ.

ದೊಡ್ಡ ಮನುಷ್ಯ ಹೆದರಿ ನಡುಗಿದ. ಬೆವರಲ್ಲಿ ಮುಳುಗಿದ. ಬಲಗೈಯೊಂದನ್ನು ಮಾತ್ರ ಮೇಲೆತ್ತಿ ಹಿಡಿದ.

"ಹುಂ! ಎಡಗೈ! ಮೇಲಕ್ಕೆ ಹೋಗಲಿ ........ತಂಟೆಮಾಡಬೇಡ........ ಬುರುಡೆ ಸೀಳಿ ಬಿಡುತ್ತೇನೆ! ಎಡಗೈ!"

ದೊಡ್ಡಮನುಷ್ಯನ ಗಂಟಲು ಗದ್ಗದಿಸಿತು. "ಆಗೋದಿಲ್ಲಪ್ಪ!" ಎಂದ.

"ಏಕೆ?"

"ವಾಯು! ತೋಳು ಊದಿಕೊಂಡಿದೆ. ವಿಪರೀತ ನೋವು ...'

"ನವೆ ಇದೆಯೇನು?"

"ಇತ್ತು....ಒಂದು ವಾರದಿಂದ ಕಡಮೆ"

ತಸ್ಕರ ತುಸು ನಕ್ಕ. ದೊಡ್ಡಮನುಷ್ಯನಿಗೆ ಕೋಪ ಉಕ್ಕಿ ಬಂತು. "ಯಾಕಪ್ಪ ನನ್ನ ಅವಸ್ಥೆ ನೋಡಿ ಹಾಸ್ಯಮಾಡುತ್ತೀಯಾ! ಕದಿಯುವುದಕ್ಕೆ ಬಂದವನು ಕದ್ದುಕೊ!....ಅಕೊ!, ಅಲ್ಲೇ ಇದೆಯಲ್ಲಾ, ನಿನಗೆ ಬೇಕಾದದ್ದು...... ಆ ಟ್ರಂಕಿನೊಳಗೆ 60 ರೂ ಇದೆ; ನನ್ನ ಸಂಬಳದಲ್ಲಿ ಉಳಿದದ್ದು....ಇವತ್ತು 14. ನೋಡಪ್ಪ,

ತಾರೀಖು ! ಇಂಡಿಯಾ ಡೊಮನಿಯನಾಗುವ ದಿನ ನಾಳೆ ಕೊಂಚ ಮಜಮಾಡು ! ನನಗಂತೂ ಹೆಚ್ಚು ತಿರುಗಾಡುವುದಕ್ಕಾಗುವುದಿಲ್ಲ ... ....... ...."

"ನೋಡು ! ನನಗೂ ಇದೆ, ಈ ಹಾಳು ಎಡಗೈ ವಾಯು ! ಅದಕ್ಕೇನೆ ನನಗೆ ಒಂದೇ ಕೈನ ಬಾವುಟದ ಹಾಗೆ ಎತ್ತಿ ಹಿಡಿದಿರೋ ನಿನ್ನ ನೋಡಿ ನಗು ಬಂದದ್ದು.... ನಗು ಅಲ್ಲ, ಅದು ! ಕರುಣೆ ಕಣಯ್ಯ ! ನಾಲ್ಕು ವರ್ಷದಿಂದ ನಾನೂ ಅನುಭವಿಸುತ್ತಾ ಇದೇನೆ....ನನ್ನ ಕಸಬಿಗೂ ಅದಕ್ಕೂ ದಾಯಾದಿ ಸಂಬಂಧ ......ಜನ್ಮಕ್ಕಂಟಿದ್ದು, ಹಾಳು"

"ತುಳಸಿ ಸೊಪ್ಪಿನ ರಸ ಹಚ್ಚಿ ನೋಡಪ್ಪ"

"ಅಯ್ಯೋ ! ತುಳಸಿ ತೋಟಾನೆಲ್ಲ ಒಂದು ರಾತ್ರಿ ಲೂಟಿ ಮಾಡಿ ಗ್ಯಾಲನ್ ಗಟ್ಟಲೆ ರಸ ಹಿಂಡಿ ಲೇಪಿಸಿದ್ದಾಗಿದೆ"

"ಕೆಲವರು ಏಕಾಂಬರೇಶ್ವರ ಗುಳಿಗೆ ನುಂಗುತ್ತಾರೆ"

"ಥತ್ ! ಅದಕ್ಕಿಂತ ಕವಡೆ ನುಂಗಬಹುದು....ಐದು ತಿಂಗಳು ನುಂಗಿದೆ, ದಿನವೊಂದಕ್ಕೆ ನಾಲ್ಕೋ, ಆರೋ ! ಏನೂ ಪ್ರಯೋಜನವಿಲ್ಲ. ವಿಶ್ವಗಂಧಿಲೇಹ ಅಂತ ಬಂದಿದೆ. ಅದನ್ನ ಸೇವಿಸಿದಾಗ, ಎರಡು ವಾರ ಕೊಂಚ ಗುಣ ಕಂಡು ಬಂತು....ಮತ್ತೆ ಯಥಾಪ್ರಕಾರ! ನೀವು ಹೇಳಿದ ಹಾಗೆ....ಎಲ್ಲಿ; ಬಲಗೈನ ಕೆಳಕ್ಕಿಳಿಸಿ, ಪರವಾಗಿಲ್ಲ...... ನೀವು ಹೇಳಿದ ಹಾಗೆ ಊದುವುದು, ಉರಿಯುವುದು, ಪ್ರಾರಂಭ.... ಭುಜಬಲತೈಲವೂ ಅಷ್ಟೆ.... ಶುದ್ಧ ಮೋಸ.... ಅನಿಲಾನಂದ ಅಂತ ಒಬ್ಬರು ಸನ್ಯಾಸಿಗಳು ಕೊಟ್ಟ ಬೂದೀನೇ ನನಗೆ ವಾಸಿ ಎನಿಸಿತು. ಅದನ್ನ ತೋಳಿಗೆ ಬಳಿದರೆ, ಕಿಟಕಿ ಕಂಬಿ ಕೀಳುವಷ್ಟು ಶಕ್ತಿ ಬರುವುದು ನನಗೆ......."

"ನಿಮಗೆ ಬೆಳಗ್ಗೆ ನೋವು ಜಾಸ್ತಿಯೋ, ಸಂಜೆಗೋ ?"

"ಸಂಜೆ....ಅಂದರೆ, ರಾತ್ರಿ....ಆದ್ದರಿಂದಲೇ ತಾಪತ್ರಯ...."

"ನನಗೂ ರಾತ್ರೀನೇ....ಆಫೀಸಲ್ಲಿರುವಾಗ, ಹಾಳು, ನೋವೂ ಇಲ್ಲ ಗೀವೂ ಇಲ್ಲ"

"ಅಲ್ರಿ ! ನೀವು ಕುರೀಕೋತಿ ರಸಾಯನ ತಿಂದಿಲ್ಲವೆ ?"

"ಇಲ್ಲಪ್ಪ ! ನಿಮ್ಮ ತೋಳಿನ ನೋವು ಹೇಗೆ........ಚುಚ್ಚುವ ನೋವೋ, ಉರಿಯುವ ನೋವೋ ?"

"ದಬ್ಬಳ ತೆಗೆದು ಚುಚ್ಚುವ ಹಾಗೆ.... ....ಇದ್ದಕ್ಕಿದ್ದ ಹಾಗೆ ಷುರು ! ಈಚೆಗೆ ನಾನು ಮಹಡಿ ಮನೆಗಳಿಗೆ ಭೇಟಿ ಕೊಡೋದೇ ಇಲ್ಲವಲ್ಲಾ........ಅಷ್ಟು ಎತ್ತರದ

ಲ್ಲಿರುವಾಗ ತೋಳು ಚಕ್ಕರ್ ಕೊಟ್ಟರೆ, ಗತಿ ಏನು?........ಒಂದೇ ಮಾತಲ್ಲಿ ಹೇಳಿ ಬಿಡಲೆ? ಈ ಡಾಕ್ಟರುಗಳಿಗೆ ಏನೂ ಬರದು!"

"ಹೌದು, ಕಣಪ್ಪ! ನಿಜ! ಸಾವಿರಾರು ರೂಪಾಯಿ ಮಾತ್ರ ಸವೆಯಿತು ನನ್ನದು ...ಕೆಂಚಗೆ ಕೆಂಡದ ಹಾಗಾಗುತ್ತೆ, ಶನಿ, ಬೆನ್ನೆಲ್ಲ!"

"ಬೆಳಗ್ಗೆ? ಹೌದು! ನನಗೂನೂ! ಮಳೇಗಾಲದಲ್ಲಂತೂ...."

"ಹೂ! ಮದ್ರಾಸಲ್ಲಿ ಮಳೆ ಬಿದ್ದರೆ ಸಾಕು, ನನ್ನ ಬೆನ್ನು ಕೆಂಚಗೆ........"

"ಹಾ! ಹಾ! ಹಾಗೆಯೇ, ನನಗೂನೂ! ನರಕಯಾತನೆ ಅಂತಾರಲ್ಲಾ, ಅದು ಕಣಪ್ಪ! ಇದು. ಪೋಲೀಸರೂ ಕೂಡ ಇಷ್ಟು ಹಿಂಸೆ ಕೊಡಲಾರರು...."

"ಅದು ನನಗೆ ಗೊತ್ತಿಲ್ಲ....ಅಂತೂ, ನರಕ ಅಂತಾರಲ್ಲಾ, ಅದು ನನಗೇನೋ ಇಲ್ಲೇ........ಈ ತೋಳಿನಮೇಲೆಯೇ ...."

"ಅಲ್ರಿ! ಅಂದಹಾಗೆ ನೀವು ಮೊಸಳೆ ಮುಲಾಮು ಏಕೆ ಸವರಬಾರದು?"

"ಹೋಟೆಲು ಬೆಣ್ಣೆ ವಾಸಿ, ಆ ಕೆಸರಿಗಿಂತ!"

"ನಿಜ ಅನ್ನಿ! ಮಾರುವ ಜನ ಮಹಡಿ ಕಟ್ಟಿಕೋತಾರೆ, ಅಷ್ಟೆ; ಅದರಿಂದ ಪ್ರಯೋಜನ! ಹೆಂಡವೊಂದೇ ಇದಕ್ಕೆ ಸಿದ್ಧೌಷಧ! ನೀವು ಬಾಟ್ಲೆಯವರು ಅಂತ ಕಾಣುತ್ತೆ........"

"ಆಗೊಂದು....ಈಗೊಂದು...."

"ಓ! ಹಾಗಾದರೆ ಬನ್ನಿ....ಹೋಗೋಣ....ಬಟ್ಟೆ ಹಾಕಿಕೊಳ್ಳಿ...."

"ಕೋಟು ತಗುಲಿಸುವುದಕ್ಕೆ ಬೆಳಗ್ಗೆ ಜವಾನ ಬರಬೇಕು"

"ಬೇಡಿ. ನಾನೇ ಹಾಕುತ್ತೇನೆ....ಚೂರೀಚೂರ್ಣ ಅಂತ ಒಂದು ಪುಡಿ ಸಿಕ್ಕುತ್ತೆ ಅಂಗಡೀಲಿ...ಅದನ್ನ ತಂದು ಕೊಬರಿ ಎಣ್ಣೇಲಿ ಕಲಸಿ ಹಚ್ಚಿನೋಡಿ.... ಕೊಂಚ ಶಮನವಾಗುತ್ತೆ ನೋವು....ನಾನು ಕೆಲವೇಳೆ ತಂದು ಹಚ್ಚುವುದುಂಟು...."

"ಇಬ್ಬರೂ ಇಳಿದರು ಮೆಲ್ಲಗೆ....ಮೆಟ್ಟಲು! ಚೂರೀಚೂರ್ಣವೋ....ತಂದು ನೋಡುತ್ತೇನೆ, ನಾನೂನೂ. ಓ! ನನ್ನ ಪರ್ಸು ಮೇಜಿನಮೇಲೆ ಇತ್ತು....ತರಲು ಮರೆತೆನಲ್ಲಾ...."

"ಪರವಾಗಿಲ್ಲ; ಬನ್ನಿ! ಇವತ್ತು ನನ್ನ ಖರ್ಚಿನಲ್ಲೇ ಆಗಲಿ, ಬಾಟ್ಲೆ ಬಗ್ಗಿಸೋದು........"

(ಓ. ಹೆನ್ರಿಯಿಂದ)

---

# ಜಾಹಿರಾತು ಸ್ವಾರಸ್ಯ

—o—

28 ವರ್ಷದ ಪದವೀಧರ ಬ್ಯಾಂಕ್ ನೌಕರ (ತಿಂಗಳಿಗೆ 150 ರೂ.)ರೊಬ್ಬರಿಗೆ, ವಾಸಕ್ಕೆ ಯೋಗ್ಯವಾದ ಮನೆಯೊಂದನ್ನು ಬಾಡಿಗೆಗೆ ಕೊಡಬಲ್ಲ ಒಬ್ಬರ ಕನ್ಯಾ, ಮದುವೆಗಾಗಿ, ಬೇಕಾಗಿದೆ. ಮನೆ ಪ್ಲಾನನ್ನು ಕೂಡಲೇ ಕಳುಹಿಸಿ.

* * * *

ಕೂಡಲೇ ಬೇಕಾಗಿದೆ....ಹತ್ತು ವರ್ಷದ ಹುಡುಗ....ಕ್ಯೂ ನಿಲ್ಲಲು ಸಮರ್ಥನಾಗಿರಬೇಕು........ತಿಂಗಳಿಗೆ ಇಪ್ಪತ್ತು ರೂಪಾಯಿ ಕೊಡಲು ಸಿದ್ಧರಿದೇವೆ.

* * * *

ಸಿನಿಮ ನಡೆಯುತ್ತಿರುವಾಗಲೇ ಹಿಂದಿಯನ್ನು ಕನ್ನಡಕ್ಕೆ ತರ್ಜಮೆಮಾಡಿ ಕಿವಿಯಲ್ಲಿ ಹೇಳುವ ಜಾಣರಾದ ರಾಷ್ಟ್ರಭಾಷಾವಿಶಾರದರೊಬ್ಬರು ಬೇಕಾಗಿದೆ ತಕ್ಷಣವೇ ಬರೆಯಿರಿ.

* * * *

ಪರಮಾಣು ಬಾಂಬಿನ ಸಿಡಿತದಿಂದ ತಪ್ಪಿಸಿಕೊಳ್ಳಲು ಮಂತ್ರ ಕವಚವನ್ನು ಉಪಯೋಗಿಸಿ. ಮುಂದಿನ ಯುದ್ಧದಲ್ಲಿ ನಿಮಗೆ ಇದು ಪ್ರಾಣದಾನಮಾಡುವುದು. ಇಂದೇ ಬರೆಯಿರಿ. (ಮಹತೋಮಹಿಮ ಏಜನ್ಸಿ.)

* * * *

ಚಿತ್ರವೊಂದಕ್ಕೆ ಎರಡಾಣೆ........ಶಾಲಾ ಬಾಗಿಲಲ್ಲೇ ತಂದು ಸಪ್ಲೈಮಾಡಲಾಗುತ್ತೆ....ಸುತ್ತಳತೆ 2½ ಅಂಗುಲ; ಉದ್ದ 4½ ಅಡಿ.........ನೂರಕ್ಕೆ 10 ರೂ. ....ಉಪಾಧ್ಯಾಯರಿಗೆ ಪ್ರತ್ಯೇಕ ರಿಯಾಯತಿ........ವಿದ್ಯಾಭ್ಯಾಸ ಇಲಾಖೆಯಿಂದ ಅಂಗೀಕೃತವಾದದ್ದು........(ಚರ್ಮ ಚಿಕಿತ್ಸಾಲಯ)

* * * *

ಇದೀಗ ಸುಸಮಯ. ಸುಲಭ ಬಾಡಿಗೆ.......೧ನೇ ರಸ್ತೆ, 33ನೇ ನಂ: ಮನೆಯ ಮೋಟಾರ್ ಷೆಡ್ಡು........ನವದಂಪತಿಗಳ ಸಂಸಾರಕ್ಕೆ ತುಂಬ ಯೋಗ್ಯವಾದದ್ದು........ಮಾಲೀಕರ ಜೇಬಿಯನ್ನಿರಿಸಿದ ಮೇಲೆ, ಉಳಿದ ಜಾಗಕ್ಕೆ 35 ರೂ. ಮಾತ್ರ.......

* * * *

ಪ್ರಖ್ಯಾತ ' ಅಹಿಂಸಾ ' ದಂತವೈದ್ಯರು ; ಹಾಗೂ ಸೈಕಲ್ ರಿಪೇರರು ! ಗಡಿಯಾರ, ಗ್ರಾಮಫೋನು, ವಗೈರಾಗಳನ್ನೂ ಸರಿಪಡಿಸಲಾಗುವುದು. ಮಿಕ್ಕ ವೈದ್ಯರಲ್ಲಿ ಹೋಗಿ ಬಾಯಿ ಬಾಯಿ ಬಿಡಬೇಡಿ ; .. ನಮ್ಮಲ್ಲಿಗೆ ಬನ್ನಿ ! ಉಚಿತವಾಗಿ ಉದುರಿಸಿ, ರಿಯಾಯಿತಿಯಲ್ಲಿ ಕಟ್ಟಿಸಿಕೊಡುತ್ತೇವೆ.

* * * *

ಬೇಕಾಗಿದೆ. ಆಸ್ಪತ್ರೆ ಯಾವುದಾದರೊಂದರಲ್ಲಿ 4 ಬೆಡ್ಡುಗಳು ಬೇಕಾಗಿದೆ ; ಖಾಯಿಲೆ ಏನೂ ಇಲ್ಲದ ಪೆನ್‌ಷನ್‌ದಾರರೊಬ್ಬರಿಗೆ........ವಾಸಕ್ಕೆ ಮನೆ ಸಿಕ್ಕದ ಪ್ರಯುಕ್ತ ; ಗಂಡ... ಒಬ್ಬ ಹೆಂಡತಿ....ಇಬ್ಬರು ಅತ್ತೆಯರು.

* * * *

———



# ಮೇಲು ಪಂಕ್ತಿ

ನಾನು ಚೆನ್ನಗಿರಿಯಲ್ಲಿ ಹುಟ್ಟಿದ್ದು ನನ್ನ ತಪ್ಪೆ? ಅಥವಾ, ನನ್ನ ತಂದೆಗೆ ಪದ್ಮನಾಭ ಎಂಬ ಹೆಸರಿದ್ದದ್ದು ನನ್ನ ತಪ್ಪೆ? ನನ್ನ ತಾತನ ಹೆಸರು ರಾಮಸ್ವಾಮಿ ಎಂದಾದದ್ದಕ್ಕೂ ನನ್ನ ಮೇಲೆ ತಪ್ಪು ಹೊರಿಸುವ ಹಾಗಿಲ್ಲ. ಈ ಮೂರು ಕಾರಣಗಳಿಂದಲೂ, ನನ್ನ ಹೆಸರು, ಶಾಲಾ ರಿಜಿಸ್ಟರಲ್ಲಿ ಸಿ. ಪಿ. ರಾಮಸ್ವಾಮಿ ಎಂದಾಯಿತು. ಮೊದಮೊದಲು ಏಕೆ, ಮೊನ್ನೆ ಮೊನ್ನೆವರೆಗೂ ನನಗೂ ಅದೊಂದು ಹೆಮ್ಮೆಯ ವಿಷಯವೇ ಆಗಿತ್ತು. ಲೋ, ಸೀ. ಪಿ. ಎಂದೇ ನನ್ನನ್ನ ಮಾಸ್ತರುಗಳೂ ದೋಸ್ತಿಯವರೂ ಸಂಬೋಧಿಸುತ್ತಿದ್ದದ್ದು. ತಮಿಳರಂತೆ ಕನ್ನಡಿಗರೂ ಇಂಗ್ಲೀಷ್ ಅಕ್ಷರಮಾಲೆಯನ್ನೇ ಅಲಂಕಾರಕ್ಕೆ ಉಪಯೋಗಿಸುವುದು ಚೆನ್ನ ಎಂದು ನಾನೂ ಪ್ರಚಾರಮಾಡುತ್ತಿದ್ದೆ. ತಮಿಳರು ಸಿ. ಆರ್, ಜಿ. ಎನ್. ಬಿ., ಎಂ. ಎಸ್., ಎಸ್. ಎಸ್., ಎಸ್. ವಿ. ವಿ., ಎಂದು ಅವರ ಮಹಾತ್ಮರನ್ನೂ ಗಮಕಿ ಗಾಯಕಿಯರನ್ನೂ ಸಾಹಿತಿ ಸಂಗೀತಿಯರನ್ನೂ ಕೊಂಡಾಡುತ್ತಾರೆ. ಅವರಂತೆಯೇ ನಾವೂನೂ ನಮ್ಮ ದ. ರಾ, ವಿ. ಕೃ., ತೀ. ನಂ., ಕು. ವೆಂ., ರಂ ಶ್ರೀಗಳನ್ನು ತೊರೆದು, ಜಿ. ಪಿ., ಬಿ. ಎಂ., ಎಸ್. ಗಳನ್ನೇ ಉಳಿಸಿಕೊಳ್ಳಬೇಕೆಂದು ನಾನು ವಾದಿಸುತ್ತಿದ್ದೆ. ಏಕೆಂದರೆ, ಕನ್ನಡ ಅಕ್ಷರಮಾಲೆಗಳಿದ್ದರೆ, ನಾನು ಬರೀ ಚೆ. ಪ. ರಾ. ಆಗಿಬಿಡುತ್ತಿದ್ದೆ. ಸೀ. ಪಿ. ಗೂ ನನಗೂ ಇದ್ದ ನಿಕಟ ಬಾಂಧವ್ಯ ಮುರಿದು ಬೀಳುತ್ತಿತ್ತು.

ನನ್ನನ್ನು ಹಲವಾರು ಜನ ಸರ್. ಸೀ. ಪಿ., ಎಂದೇ ಕರೆಯುವರು ಆಗಂತೂ, ನನಗೆ ಹಿಡಿಯಲಾರದ ಆನಂದವಾಗುತ್ತಿತ್ತು. ಅವರ ವಾಚಾಲತ್ವ, ಅವರ ಕಾರ್ಯದಕ್ಷತೆ, ಅವರ ದೇಶಾಭಿಮಾನ, ಅವರ ದಾನಶೂರತ್ವ, ಅವರ ಪ್ರತಿಭೆ–ಇವುಗಳನ್ನೆಲ್ಲ ನಾನು ಕೊಂಡಾಡಿದೆ. ನನಗೆ ಅದರಿಂದ ಎಳ್ಳಷ್ಟು ಪ್ರಯೋಜನವಿಲ್ಲದಿದ್ದರೂ, ಸರ್. ಸೀ ಪಿ. ಯವರಿಗೆ ಪರಂಗಿಯವರು ಉಚ್ಚಪದವಿಯನ್ನು ಕೊಟ್ಟಷ್ಟೂ ನಾನು ಹಿಗ್ಗಿ ಹೀರೇಕಾಯಾಗುತ್ತಿದ್ದೆ. ಅವರು ಮದರಾಸಿನ ಅಡ್ವೋಕೇಟ್ ಜನರಲಾದರು. ನಾನು ಚೆನ್ನಗಿರಿಯಲ್ಲಿ ಹಿಗ್ಗಿದೆ. ಅವರು ಎಕ್ಸಿಕ್ಯುಟಿವ್ ಕೌನ್ಸಿಲರಾದರು. ನಾನು ನನ್ನ ಮಿತ್ರರಿಗೆ ಮಸಾಲೆದೋಸೆ ಕೊಡಿಸಿದೆ. ಅವರು ಪೈಕಾರಾ ವಿದ್ಯುಚ್ಛಕ್ತಿ ಯೋಜನೆ ತಯಾರಿಸಿದರು. ನನ್ನ ಮೈಯಲ್ಲಿ ವಿದ್ಯುತ್ ಪ್ರವಾಹವಾಯಿತು. ಅವರಮೇಲೆ ವಿಲ್ಲಿಂಗ್‌ಡನ್ ದಂಪತಿಗಳ ಕಟಾಕ್ಷ ಬಿತ್ತು. ನಾನು ಅಮಿಲ್ದಾರ್ ಹೆಂಡತಿಗೆ ಡೊಂಕು ಸಲಾಂ ಹಾಕಿದೆ. ಅವರು ಕಾಂಗ್ರೆಸ್ಸನ್ನು ಬಿಟ್ಟು, ಅದರ

ಮೇಲೆ ದ್ವೇಷಕಾರಲು ಪ್ರಾರಂಭಿಸಿದರು. ನಾನು ಗಾಂಧಿ ಟೋಪಿಯನ್ನು ಮೊಳೆಗೆ ತಗುಲಿಸಿದೆ. ಹೀಗೆ, ವಿಧಿವಶದಿಂದ ನನ್ನನ್ನೂ, ನನ್ನಿಂದ ಬಹುದೂರದಲ್ಲಿ ಬಹು ಎತ್ತರದಲ್ಲಿ ಅಧಿಕಾರದ ಅಪರಿಮಿತ ಸಿರಿಸಂಪತ್ತಿನಲ್ಲಿ ಓಲಾಡುತ್ತಿದ್ದ ಸರ್. ಸೀ. ಪಿ. ಯವರನ್ನೂ, ಯಾವುದೋ ಒಂದು ಸೂಕ್ಷ್ಮತಮ ಸೂತ್ರ ಬಂಧಿಸಿತ್ತು.

ನಾನೊಬ್ಬ ಪೂರ್ಟ್‌ಲಾಯರು. ಹಳ್ಳಿ ರೈತರ ಮಂಕುತನ, ಅವರ ಪಾರ್ಟಿ ಪ್ರೇಮ, ಅವರ ಕುತಂತ್ರ ಕುಹಕ, ಅವರ ಕುರುಡು ಜಗಳ, ಅವರ ಜೂಜು ಬುದ್ಧಿ ಇವೇ ನನ್ನ ಜೀವನಾಧಾರ. ಆದ್ದರಿಂದ, ನನ್ನ ಕಸಬು ಕೂಡ ನನ್ನನ್ನು ಸೀ. ಪಿ. ಎನಿಸಿದುವು. ಬೆಂಚ್ ಗುಮಾಸ್ತೆಯರು, ಅಮಾನರು, ಕಾಪಿಯಿಸ್ಟರು, ಕಡೆಗೆ ಮೊನ್ನೆ ಮುನಿಸೀಫರೂ ಕೂಡ ನನ್ನನ್ನ " ಏನ್ರಿ! ಸರ್. ಸೀ. ಪಿ. ರಾಮಸ್ವಾಮಿ!" ಎಂದು ಪ್ರೀತ್ಯಾದರಗಳಿಂದ ಹೊಗಳಿದರು.

ಹೀಗಾಗಿ, ನನ್ನ ಮೇಲೆ ಒಂದು ಭಾರಿ ಜವಾಬ್ದಾರಿ ಬಿದ್ದಂತೆ ನಾನು ಭಾವಿಸಿದೆ. ನಾನು ಖಾಯಿಲೆ ಬಿದ್ದರೆ, ನನ್ನ ಮಾನ್ಯ ಮೇಲುಪಂಕ್ತಿಗೆ ಖಾಯಿಲೆ ಬರುವುದೋ ಎಂಬ ಭಯ ನನಗೆ. ಅವುಳಿ ಜವುಳಿಗಳಿಗೆ ಹೀಗಾಗುವುದಂತಲ್ಲಾ! ಒಂದು ಶೀತರೆ, ಮತ್ತೊಂದರ ಮೂಗಲ್ಲಿ ಸಿಂಬಳ ಸುರಿಯುವುದಂತಲ್ಲಾ!— ಯಾರೋ ಹೇಳಿದರು, ಹಾಗೆಂದು! ಸರ್. ಸೀ. ಪಿ. ಯವರೇ ನನ್ನ ಅವುಳಿ, ಎಂಬ ಭಾವನೆ ನನ್ನಲ್ಲಿ ಬಲವಾಯಿತು. ನಾನು ಒಂದು ಹೇಯಕೃತ್ಯ ಮಾಡಿದರೆ, ಅದರ ಹೇಯತನ ಆ ಮಹಾ ಮೇಧಾವಿಗೂ ತಗಲುವುದೋ ಏನೋ? ಕೆಲವು ವರ್ಷಗಳ ಹಿಂದೆ ನಾನು ಸೊಸೈಟಿ ಡೈರಕ್ಟರ್ ಪದವಿಗೆ ರಾಜಿನಾಮೆ ಕೊಟ್ಟೆ, ಮರುದಿನ ಸರ್ ಸೀ. ಪಿ. ಯವರು ಡಿಲ್ಲಿ ಮಂತ್ರಿ ಮಂಡಲದಿಂದ ತಾವು ರಾಜಿನಾಮೆಕೊಟ್ಟು ಹಿಂತಿರುಗಿದರು. ಆಗ ನನಗನ್ನಿಸಿತು, ಛೆ! ಸೊಸೈಟಿ ಡೈರಕ್ಟರ್ ಪದವಿ ಮುಳ್ಳಿನ ಹಾಸಿಗೆಯಾದರೂ, ನಾನು ಅಲ್ಲೇ ಮಲಗಿರಬೇಕಾಗಿತ್ತು; ಅನ್ಯಾಯವಾಗಿ, ನನ್ನ ಅಚಾತುರ್ಯದಿಂದ, ಸರ್. ಸೀ. ಪಿ. ಗೆ ದೊಡ್ಡ ಹುದ್ದೆ ಹೋಯಿತಲ್ಲಾ, ಅಂತ. ತಕ್ಷಣ, ನಾನು ಟಿ. ವಿ. ಆರ್. ಬಸ್ ಸರ್ವಿಸ್ ಲೀಗಲ್ ಅಡ್ವೈಸರಾಗಿ ಸೇರಿಕೊಂಡೆ; ಪಾಪ, ಸರ್. ಸೀ. ಪಿ ಗೂ ಏನಾದರೂ ಒಂದು ಹೊಸ ನೌಕರಿ ಸಿಗಲಿ, ಎಂಬ ಆಸೆಯಿಂದ. ನೋಡಿ! ತಕ್ಷಣ ಅವರಿಗೂ ಟ್ರಾವಂಕೋರಲ್ಲಿ ರಾಜಕೀಯ ಸಲಹೆಗಾರ ಎಂಬ ನೌಕರಿ ದೊರೆಯಿತು. ಹೀಗೆ, ನನ್ನ ಜಾತಕಕ್ಕೂ ನನ್ನ ಅಕ್ಷರ ಮಾಲೆಯನ್ನೇ ಹಾಕಿರುವ ಅವರಿಗೂ, ಬಲುಗಂಟು! ಈ ಗುಟ್ಟು ನನ್ನ ಆಪ್ತ ಮಿತ್ರರು ಕೆಲವರಿಗೂ, ನನ್ನ ಪ್ರಾಪ್ತ ಪತ್ನಿ ಒಬ್ಬಳಿಗೂ, ಮಾತ್ರ ಗೊತ್ತು. ಮಿಕ್ಕವರು ಯಾರಿಗೂ ತಿಳಿಯದು. ಸರ್. ಸೀ. ಪಿ. ಯವರಿಗೂ ಬಹುಶಃ ತಿಳಿಯದು.

ಕಳೆದ ಎರಡು ಮೂರು ತಿಂಗಳಿಂದ, ನನ್ನನ್ನ ಜನ ಏನ್ರಿ, ಸರ್. ಸೀ. ಪಿ ರಾಮುಸ್ವಾಮಿ, ಎಂದು ಸಂಬೋಧಿಸುವಾಗ, ಅವರ ಗಂಟಲು, ನೋಟ, ಮೂತಿ, ಮೂಗು, ತುಟಿ, ಎಲ್ಲವೂ ನನಗೆ ಅಸಹ್ಯವಾಗಿ ಕಾಣ ಹತ್ತಿವೆ. ನನ್ನ ಸಹನಾಮನ ಬುದ್ಧಿ ವಿಪರೀತಕ್ಕಿಟ್ಟುಕೊಂಡಿರುವುದರಿಂದ ನನಗೆ ಈ ಅವಮಾನವಾಗುತ್ತಿದೆ. ಆ ತ ನಿ ಗೀ ವಿಷಯ ತಿಳಿಯದು. ತಮ್ಮ ಚರ್ಯೆಯಿಂದ, ನಿರಪರಾಧಿಯಾದ ನನ್ನನ್ನೂ ಈ ಜನ ಹೀಯಾಳಿಸುತ್ತಿದಾರೆ, ಎಂದು ಗೊತ್ತಾದರೆ, ಆತ ಒಂದುವೇಳೆ ತಿದ್ದಿಕೊಳ್ಳುವನೋ, ಏನೋ? "ಏನೋ, ಸೀ. ಪಿ! ನಿನ್ನ ತರ್ಕವೆಲ್ಲ ತಳಮೇಲಾಗುತ್ತಿದೆಯಲ್ಲೋ! ವಿಜಯಲಕ್ಷ್ಮಿ ರಷ್ಯಾಗೆ ಹೋದರೆ, ನೀನು ಯಾಕೊ ಹೀಗೆ ಹೆದರಿ ನಡುಗುತ್ತೀಯೊ? ಗಾಂಧಿಗೆ ಪ್ರಾರ್ಥನೆಮಾಡೋ ವಿಧಾನನ ನೀನು ಬೋಧಿಸಬೇಕೇನೋ? ಹರಿಜನರಿಗೆ ದೇವಾಲಯ ಪ್ರವೇಶ ಮೊದಲು ಕೊಡಿಸಿದವನು ನೀನು; ಈಗ, ಅದಕ್ಕಿಂತ ಕಡೆಯಾಗಿ ಇಂಡ್ಯಾಲಯ ಪ್ರವೇಶಮಾಡೋದಿಲ್ಲ, ಅಂತಿಯಲ್ಲೋ?" ಎಂದು ಈ ಸುತ್ತಮುತ್ತಲಿನ ಹರಕು ಮುರುಕು ವಿದ್ಯಾವಂತರೆಲ್ಲ ನನ್ನನ್ನ ಹಂಗಿಸುತ್ತಿದಾರೆ.

ಇದು ಒಳ್ಳೆ ಪೀಕಲಾಟ! ಯಾರ ಮೇಲೋ ಬಿಡಬೇಕಾದ ಬಾಣಾನ ನನ್ನ ಮುಂಡಾಸಿಗೆ ಗುರಿಮಾಡಿದರೆ!........

ಶ್ರೀಮಾನ್ ಟಿ. ಎಂ. ಆರ್. ಸ್ವಾಮಿಯವರು ಕಥಾವಳಿಯಲ್ಲಿ ಕನ್ನಡ ಮಕ್ಕಳಿಗೆ ಸಲಹೆಕೊಡುತ್ತಿರುವಂತೆ, ನಾನೂನೂ ಇನ್ನುಮೇಲೆ ಚಿ. ಪ. ರಾಮುಸ್ವಾಮಿ ಎಂಬ ಹೆಸರನ್ನೇ ಬಳಸುತ್ತೇನೆ. ಸೀ. ಪಿ., ಸೀ. ಪಿ. ಅಂತ ಅನ್ನಿಸಿಕೊಂಡು, ಅವರ ಕೀಳುಪಂಕ್ತಿಯಾಗಿ ಮೆರೆದದ್ದು ಸಾಕು. ನಾಚಿಕೆ ನೀಗಿ ನಾನು ಯಾಕೆ ಅವರ ಅವುಳಿ ಅಂತ ಹೆಮ್ಮೆಪಡಲಿ?

—ಚಿ. ಪ. ರಾಮುಸ್ವಾಮಿ.

---

"ಇಂಡ್ಯಾದೇಶದ ಜನರ ಸರಾಸರಿ ಆಯುಸ್ಸು 23 ವರ್ಷ! ಅವರ ಸರಾಸರಿ ವಾರ್ಷಿಕ ವರಮಾನ ಕೇವಲ 75 ರೂ;" (ಭಾಷಣ)....ಹಾಗಾದರೆ, ನಾವು ಎಷ್ಟೇ ಶ್ರಮವಹಿಸಿ ನಮ್ಮ ವರಮಾನವನ್ನು ಹೆಚ್ಚಿಸಿಕೊಂಡರೂ, ಅದರಿಂದ ಹೆಚ್ಚು ವರ್ಷ ಸುಖ ಸವಿಯಲಾರೆವು!

* * * *



# ಇಂಡ್ಯ

---

ಬಿಡುಗಡೆ ಸವಿಯನು ಹೀರುತ ನೀನು
ಚಪ್ಪರಿಸುತ್ತಲಿ ಖುಷಿಪಡುವೆ ;
ಬಿಡುಗಡೆ ಹಬ್ಬಕೆ ಬೆಲ್ಲವ ತಂದಾ
ಇಂಡ್ಯರ ಗೋಳನು ನೀನರಿಯೆ !

ಭೂಪಟ ನೋಡುತ ಮೋದದಿ ಕುಣಿದು
ಕವಿಯೆ ! ಪದವನು ಪಾಡುತಿಹೆ !
ಎಂಪೈರ್ ಕೆಂಪಿಗೆ ಸುಣ್ಣವ ಬಳಿದಾ
ವೀರರ ಸಾಹಸ ಮರೆತಿಹೆಯಾ !

ಶತ ಶತಮಾನದ ಯಾತನೆಯಿಂದ
ಲಭಿಸಿತು ನಮಗೀ ಸ್ವಾತಂತ್ರ್ಯ !
ನಲಿಯುವ ಒಬ್ಬೊಬ್ಬಿಂಡ್ಯನ ಹೃದಯದಿ
ಶೂರರ ಕೆನ್ನೀರುಕ್ಕುತಿದೆ !

ಮುಂದಕೆ ನೋಡುವ ಮುಂದಿಯ ಕಣ್ಣಿಗೆ
ಇಂಡ್ಯವು ಹರ್ಷದಿ ಹಾಡುತಿದೆ !
ಹಿಂದಕೆ ನೋಡುವ ಇಂದಿನ ಕಣ್ಣಿಗೆ
ಯಾತನೆಯಿಂದದು ಮೂಡುತಿದೆ !

---

# ಅಜ್ಜಿಯ ಔಷಧ

ಹಲ್ಲುನೋವು ಹನ್ನೆರಡನೇ ವಯಸ್ಸಿಗೇ ನನ್ನ "ಪಾಲಿಗೆ ಬಂದ ಪಂಚಾಮೃತ" ಅದರಲ್ಲೂ ನನ್ನ ಹಲ್ಲುನೋವು ವರ್ಷಕ್ಕೆರಡಾವರ್ತಿಯಂತೆ ತಪ್ಪದೆ ಕಳೆದ ಹದಿನೈದು ವರ್ಷಗಳಿಂದ ಬರುತ್ತಲೇ ಇದೆ. ಆದರೆ ಒಂದು ಸಲವೂ ಕೆಲವರಿಗೆ ಬರುವ ಹಾಗೆ ತಡೆಯಲಾಗದ ಹಾಗೆ ಬಿದ್ದು ಒದ್ದಾಡುವ ಪ್ರಸಂಗ ಬಂದಿರಲಿಲ್ಲ. ನನಗೆ ತ್ರಾಸ ಕೊಡುತ್ತ ಇದ್ದದ್ದು (ಇರುವುದು ಅನ್ನಿ) ಒಂದೇ ಒಂದು ದವಡೇ ಹಲ್ಲು (ಎಡಗಡೆಯದು, ಕೆಳಗಿನ ದವಡೆ). "ಹೋಗಿ ಆ ಹಾಳಾದ್ದನ್ನ ಕೀಳಿಸಿ ಕೊಂಡಾದರೂ ಬಾರೋ" ಎಂಬ ನನ್ನ ತಂದೆಯ ಬುದ್ಧಿವಾದವನ್ನ ಕಾರ್ಯ ರೂಪಕ್ಕೆ ತರುವ ಧೈರ್ಯ ನನಗೆಲ್ಲಿ? ಆಸ್ಪತ್ರೆಯ ಇಕ್ಕಳದ ಹೆಸರು ಕೇಳಿದರೇ ನನ್ನ ಹಲ್ಲು 'ಜುಂ' ಅನ್ನುತ್ತಿತ್ತು.

ನಾನು ಹೆದರುತ್ತಾ ಇದ್ದ ಪ್ರಸಂಗ ಕಡೆಗೆ ಮೊನ್ನೆ ಬಂದೇ ಬಂತು. ಕಳೆದ ಏಕಾದಶೀ ದಿನ, ನಮ್ಮ ಮನೆಯಲ್ಲಿ ಯಥಾಪ್ರಕಾರ ಉಪವಾಸ ನಾನೂ ನಾಲ್ಕೈದು ಇಡ್ಲಿ, ಎರಡು ದೋಸೆ, ಒಂದಿಷ್ಟು ಉಪ್ಪಿಟ್ಟು, ಸಜ್ಜಿಗೆ, ನಂಜಿ ಕೊಳ್ಳೋದಕ್ಕೆ ಬೋಂಡ, ಪಕೋಡ, ಕಡಲೇ ಬೇಳೆ ಕೋಸಂಬರಿ ಇತ್ಯಾದಿ ಗಳನ್ನು ಬಲಗಡೆ ದವಡೇಲೇ ಅಗಿದು ಮುಗಿಸಿದೆ. ಮುಗಿಸಿ, ರಾಮಾ ಕೃಷ್ಣ ಅನ್ನುತ್ತ ಪಾನಕ ಗೀನಕ ಕುಡಿದು ಮಲಗಿದ್ದರೆ ಯಾವ ತೊಂದರೆಯೂ ಇರುತ್ತಿರ ಲಿಲ್ಲ. ಆದರೆ ಹಾಳಾದ್ದು ಚಪಲ, ವಿಷಮಗಳಿಗೇಲಿ ಚಕ್ಕುಲಿ ಗೂಡೇಗೆ ಕೈ ಹಾಕಿದೆ. ಏಳೆಂಟು ಚಕ್ಕುಲೀನೂ ತೀರಿಸಿದೆ.

ಕಾದಿತ್ತು, ಬೆಳಗಾಗುತ್ತಲೂ ನನ್ನ ಹಲ್ಲು ಜಪ ಮಾಡುವುದಕ್ಕೆ. ಪ್ರಾರಂಭದಲ್ಲಿ ಸಣ್ಣ ಸುತ್ತಿಗೆಯಿಂದ ದವಡೆಯ ಆ ಭಾಗದಲ್ಲಿ ಮೆಲ್ಲಗೆ ಕುಟ್ಟುತ್ತಿರುವಂತೆ ಇತ್ತು. ಮುಖ ತೊಳೆದು ಕಾಫಿ ಕುಡಿಯುವ ವೇಳೆಗೆ ಸುತ್ತಿಗೆ ಸ್ವಲ್ಪ ದೊಡ್ಡ ಸೈಜಿಗೆ ಬದ ಲಾಗಿದ್ದದ್ದಲ್ಲದೆ, ಹೊಡೆತವೂ ಸ್ವಲ್ಪ ಜೋರಾಗಿತ್ತು. ಕ್ರಮೇಣ ಸುತ್ತಿಗೆಗೆ ಸಹಾಯ ವಾಗಿ ಅದರ ಜತೆಗೊಂದು ಸ್ಕ್ರೂಡ್ರೈವರ್ ಸಹ ಕೆಲಸಕ್ಕೆ ಪ್ರಾರಂಭಮಾಡಿತು, ಹೊರಗಡೆಯಿಂದ, ನಿಧಾನವಾಗಿ ಹಲ್ಲಿನ ಬುಡವನ್ನು ಕೊರೆಯುತ್ತ, ಕೊರೆದ ಜಾಗ ದಲ್ಲಿ ಸ್ವಲ್ಪ ಸ್ವಲ್ಪವಾಗಿ ಕಾದ ಕಬ್ಬಿಣವನ್ನು ಹುಯ್ಯುವಂತಾಯ್ತು.

ಎಲ್ಲಾ ಸಹಿಸಿದೆ. ಆದರೆ ಯಾವಾಗ ದವಡೆಯಷ್ಟನ್ನೂ ಬೀಸುವ ಕಲ್ಲಿ ನಲ್ಲಿಟ್ಟು ಬೀಸುವ ಪ್ರಯತ್ನ ಆರಂಭವಾಯ್ತೋ, ಅದೇ ತಡ ; ಅರ್ಧಗಂಟೆಯಿಂದ ನಮ್ಮಜ್ಜಿ ತನ್ನ ದಂತವೈದ್ಯ ಪ್ರಾವೀಣ್ಯತೆಯನ್ನು ಪಯೋಗಿಸಿ ನಡೆಸುತ್ತಿದ್ದ ಹನ್ನೊಂ

ದನೇ ಪ್ರಯೋಗವನ್ನು ನಿಲ್ಲಿಸ ಹೇಳಿದೆ. ಇನ್ನೂ ಆಗತಾನೇ ಅಜ್ಜಿ ಓಮ, ಶುಂಠಿ, ಉತ್ತುತ್ತಿಕಾಯಿ ಬೀಜ, ಕರಿಬೇವಿನಸೊಪ್ಪು, ಬಿಲ್ಪತ್ರೆ, ನವಿಲುಗರಿ, ಬೆಣಚು ಕಲ್ಲು, ಲವಂಗ, ದಂತ, ಗ್ರಾಮಾಫೋನ್ ಪ್ಲೇಟಿನ ಚೂರು, ಏಲಕ್ಕಿಸಿಪ್ಪೆ, ಇತ್ಯಾದಿಗಳನ್ನೆಲ್ಲ ತಕ್ಕ ಪ್ರಮಾಣದಲ್ಲಿ ಒಟ್ಟುಗೂಡಿಸಿ ಜೇನುತುಪ್ಪದಲ್ಲಿ ಅರೆಯುತ್ತಾ ಇದ್ದರು, ನನ್ನ ಹಲ್ಲಿಗಾಗಿ. ಇನ್ನದಕ್ಕಿಂತ ಶ್ರೇಷ್ಠವಾದ ಓಷಧಿ ಎಲ್ಲೂ ಇರಲಾರದು ಅಂತ ಅವರ ನಂಬಿಕೆ.

ಆಯುರ್ವೇದ, ಯುನಾನಿ ಔಷಧಿಗಳನ್ನು ಇದಕ್ಕೆ ಮುಂಚೆ ಎಷ್ಟೋ ಬಾರಿ ಉಪಯೋಗಿಸಿ ನಿಷ್ಫಲವಾಗಿತ್ತು. ಇನ್ನು ಬೇರೆ ಯಾವ ಉಪಾಯವೂ ಇಲ್ಲವೆಂದು ತೋರಿದ ಕ್ಷಣ, ಹಲ್ಲು ವೈದ್ಯರು ಯಾರನ್ನಾದರೂ ಮರೆ ಹೋಗುವ ಯೋಚನೆ ಮಾಡಿದೆ ; ಯಾರ ಹೆಸರೂ ತಟ್ಟನೆ ನೆನಪಿಗೆ ಬರಲಿಲ್ಲ. ದವಡೆಯನ್ನದುಮಿ ಕೊಂಡೇ ಪಕ್ಕದ ರಸ್ತೆಯಲ್ಲಿದ್ದ ಸೊಸೈಟಿಯ ಟೆಲಿಫೋನಿಗೆ ಓಡಿದೆ. ಡೈರೆಕ್ಟರಿ ಯಲ್ಲಿ ಡೆನ್‌ಟಿಸ್ಟುಗಳ ಹೆಸರುಗಳನ್ನೆಲ್ಲ ನೋಡಿದೆ. " ಆಚುನ್ ಚುಂಗ್, " " ಚಾಂಗ್‌ಯೆನ್ ", " ಮಿಂಗ್ ಉಚಿನ್ " ಅನ್ನುವ ಚೀನೀ ವೈದ್ಯರನ್ನುಳಿದು ಇನ್ನು ನಾಲ್ಕೈದು ಹೆಸರುಗಳಿದ್ದವು. ಅವರಲ್ಲಿ ಡಾಕ್ಟರ್ ಮೃತ್ಯುಂಜಯರ್ ಅವರ ಹಸ್ತಗುಣ ಅಪಾರವಾದದ್ದೆಂಬುದು ತಟ್ಟನೆ ನೆನಪಿಗೆ ಬಂತು. ಅವರು ಲಕ್ಷಾಧಿ ಕಾರಿಗಳ ಹಲ್ಲುಗಳನ್ನೆಲ್ಲಾ ಗುಣಪಡಿಸಿ ತಾವು ಕೋಟ್ಯಾಧಿಕಾರಿಯಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಸರಿ, ತಿರುಗಿಸಿದೆ ಚಕ್ರ, ದವಡೆಯನ್ನ ಒಂದು ಕೈಲಿ ಅದುಮಿಕೊಂಡೇ. " ಹಲೋ, ಹಲೋ, ಹಲ್ಲೋ........! "

" ಹೌದು, ಹಲ್ಲಿನ ಆಸ್ಪತ್ರೇನೆ, "

" ನಮಸ್ಕಾರ. ಒಂದು ಹಲ್ಲು ವಿಪರೀತ ಇದಾಗಿದೆ ..."

" ತಡೀರಿ—ತಮ್ಮ ಹೆಸರೇನು........"

" ಶಿವಸ್ವಾಮಿ .......Yes.....ಹೌದು .......ಇನಿಷಿಯಲ್ಲೇ ? ಎಸ್. ಎನ್. ಎಸ್ for ಸಂಕಟ. ಎನ್ for ನೋವು . "

" ಸರಿ. ಈಗ ಗಂಟೆ ಹತ್ತು. ಇಲ್ಲಿ 12-15ರವರೆಗೆ ಎಂಗೇಜ್‌ಮೆಂಟ್ಸ್ ಇವೆ. ನೀವು ಸರಿಯಾಗಿ 12-20ಕ್ಕೆ ಬನ್ನಿ. ಕನ್ಸಲ್ಟಿಂಗ್ ಛಾರ್ಜು 50 ರೂಪಾಯಿ ತನ್ನಿ. ನಮಸ್ಕಾರ ".

ಅಯ್ಯೊ ! ಇನ್ನೂ ಎರಡು ಗಂಟೆ ಕಾಲ ! ಬೀಸುವ ಕಲ್ಲು ಹೋಗಿ ದವಡೆಯ ಮೇಲೆ ರೋಡ್ ಇಂಜಿನ್ ಓಡಾಡಲಾರಂಭಿಸಿತ್ತು. ಅಜ್ಜಿ ತಂದ ಬಿಸಿ ಬಿಸಿ ಗಂಜಿ ಹೇಗೋ ಕುಡಿದು ಹೊಟ್ಟೆ ತುಂಬಿಸಿಕೊಂಡೆ. ಅಲ್ಲಿಂದ ಒಂದರ್ಧಗಂಟೆಯ ಕಾಲ

ನೋವಿನ ಮುಸುಕಿನಲ್ಲೇ ಒಂದು ವಿಧವಾದ ನಿದ್ದೆ ಬಂದಹಾಗೆ ಬಂದು, ಹಾಗೇ ಬಿದ್ದುಕೊಂಡಿದ್ದೆ. ಹಾಗೂ ಹೀಗೂ ಹನ್ನೆರಡರವರೆಗೆ ಕಾಲಕಳೆದೆ. ನನಗೆ ತಿಳಿಯದ ಹಾಗೆ ನನ್ನ ದವಡೆಗೆ ಅಜ್ಜಿಯ ಹನ್ನೊಂದನೆಯ ಔಷಧ ಬಳಿಯಲಾಗಿತ್ತು. ಗಾಡಿ ಬಂದು ನಿಂತ ಶಬ್ದ ಕೇಳಿ ಮೆಲ್ಲಗೆ ಎದ್ದು, ಕೋಟು ಹಾಕಿಕೊಂಡು ಹೊರಟೆ. ಅಜ್ಜಿ ಒಂದು ಲೋಟ ಮಜ್ಜಿಗೆ ಕುಡಿಸಿ, " ನೀನು ಅಲ್ಲಿಗೆ ಹೋಗಿ ಸೇರೋದರೊಳಗೆ ನನ್ನ ಔಷಧಿ ಕೆಲಸಮಾಡಿರದಿದ್ದರೆ ನನ್ನ ಮೂಗು ಮೂರು ತುಂಡು ಮಾಡಿಕೋತೀನಿ " ಅಂದು ಹೆದರಿಸಿದರು,

ಅಜ್ಜಿ ಮೂಗು ತುಂಡಾಗಬೇಕಾದ ಪ್ರಮೇಯ ಒದಗಲಿಲ್ಲ. ಗಾಡಿ ಸ್ವಲ್ಪ ದೂರ ಹೋಗುವುದರಲ್ಲಿ ನನ್ನ ನೋವು ಸ್ವಲ್ಪಸ್ವಲ್ಪವಾಗಿ ಇಳಿಯಲಾರಂಭಿಸಿತು. ಡಾ|| ಮೃತ್ಯುಂಜಯನ್‌ರ ಆಸ್ಪತ್ರೆ ಹತ್ತಿರವಾಗುತ್ತಿದ್ದಂತೆ ನೋವೆಲ್ಲ ಮಂತ್ರಹಾಕಿದಂತೆ ಮಾಯವಾಗಿ ಹಲ್ಲು ಇನ್ನೊಂದು ಏಕಾದಶಿ ಉಪವಾಸಕ್ಕೆ ಸಿದ್ಧವಾಗಿತ್ತು. ಮೊದಲು ನಾನು ನಂಬಲಿಲ್ಲ. ಆ ಹಲ್ಲನ್ನ ಕುಟ್ಟಿಕುಟ್ಟಿ ನೋಡಿಕೊಂಡೆ. ಹಲ್ಲು ನೋವಿನ ನೆನಪು ಕೂಡ ಉಳಿದಿರಲಿಲ್ಲ. ಡಾಕ್ಟರ ದುರದೃಷ್ಟ ಅಂದುಕೊಂಡೆ.

ಸರಿಯಾಗಿ 12–20ಕ್ಕೆ ಡಾಕ್ಟರೆದುರು ಹೋಗಿ ನಿಂತೆ. ಅವರು " ರೂಪಾಯಿ ಆ ಗುಮಾಸ್ತರ ಹತ್ತಿರ ಕಟ್ಟಿ ರಸೀತಿ ತಗೊಳ್ಳೀ. ಯಾವ ಹಲ್ಲು ಅಂದ್ರಿ ? " ಅಂದರು.

ನಾನು ಕೈಕೈ ಹಿಸುಕಿಕೊಂಡು, " ಕ್ಷಮಿಸಿ, ಈಗ....ನನ್ನ ಹಲ್ಲಿಗೆ ಯಾವ ಕೇಡೂ ಇಲ್ಲ........ವೃಥಾ ತಮಗೆ........ತೊಂದರೆ...." ಅಂದೆ.

" ಏನೂ ಪರವಾಯಿಲ್ಲ, ಕೌಂಟರ್‌ನಲ್ಲಿ ರೂಪಾಯಿ ಕಟ್ಟಿಬಿಟ್ಟು ಬನ್ನಿ ನೋಡೋಣ " ಅಂದರು ಡಾಕ್ಟರು.

" ಕ್ಷಮಿಸಿ ನಾಹೇಳಿದ್ದು ತಮಗೆ ಅರ್ಥವಾಗಲಿಲ್ಲ ಅಂತ........" ಅಂದೆ.

" ಎಲ್ಲ ಅರ್ಥವಾಯ್ತು. ನಿಮಗೆ ಸದ್ಯಕ್ಕೆ ನನ್ನ ಟ್ರೀಟ್‌ಮೆಂಟ್ ಅವಶ್ಯಕವಿಲ್ಲ. ಬಾಧಕವಿಲ್ಲ. ಎಂಗೇಜ್‌ಮೆಂಟ್ ಗೊತ್ತುಮಾಡಿ ಬಿಟ್ಟಿರೋದರಿಂದ ರೂಪಾಯಿ ಮಾತ್ರ....ದಯವಿಟ್ಟು....ಕಟ್ಟಿಬಿಟ್ಟು..... .. ಯಾಕಂದರೆ ಇಂಥಾ ದೊಡ್ಡ ಎಸ್ಟಾಬ್ಲಿಷ್‌ಮೆಂಟುಗಳಲ್ಲಿ ...... " ಅಂದರು ಡಾಕ್ಟರು.

" ಸ್ವಲ್ಪ ನ್ಯಾಯ ಗೀಯ " ಅಂದೆ.

" ಯಾರನ್ನ ಬೇಕಾದರೂ ವಿಚಾರಿಸಿ. ಇಲ್ಲೆಲ್ಲಾ ಫಾರಿನ್ ಪದ್ಧತಿ. ಬೇಕಾದರೆ ಪಕ್ಕದಲ್ಲೇ ನಮ್ಮ ಲಾಯರಿದ್ದಾರೆ, ಅವರನ್ನೇ ಕನ್ಸಲ್ಟ್‌ಮಾಡಿ. ಈಗ

ಸದ್ಯಕ್ಕೆ ಮುಂದಿನ ಕೇಸು ಕಾದಿದೆ ತಾವು ದಯಮಾಡಿ ಹಣ ಪಾವತಿಮಾಡಿ ಹೊರಟರೆ.......ಬಾಯ್ ! ನೆಕ್ಸ್ಟ ಕೇಸ್!" ಅಂದರು ಡಾಕ್ಟರು ದಾಕ್ಷಿಣ್ಯವಿಲ್ಲದೆ.

ಅವರ ಹತ್ತಿರ ಇನ್ನಷ್ಟು ವಾದಿಸಿ ಒಂದೆರಡು ಗಂಟೆಯಷ್ಟು ಗಡುವು ತೆಗೆದುಕೊಂಡು ಹತ್ತಿರವೇ ಇದ್ದ ನಮ್ಮ ಲಾಯರ ಬಳಿ ಹೋದೆ. ಅವರ ಬುದ್ಧಿವಾದವೇನೂ ಉತ್ತೇಜಕವಾಗಿರಲಿಲ್ಲ. ಇನ್ನೂ ಸ್ವಲ್ಪ ದೊಡ್ಡಲಾಯರಾಗಿದ್ದ ಗೋಪಾಲ ಕೃಷ್ಣಯ್ಯಂಗಾರ‍್ಯರ ಹತ್ತಿರ ಹೋದೆ. ಡಾಕ್ಟರ ಕಾಲಹರಣಮಾಡಿದ ತಪ್ಪಿಗೆ ಅವರಿಗೆ ಹಣ ತೆರಲೇಬೇಕೆಂದು ಅವರು ವಾದಿಸಿ, ಉದಾಹರಣೆಗಾಗಿ, ತಮ್ಮ ಕಾಲಹರಣದ ಸಲುವಾಗಿ ನನ್ನಿಂದ ಹದಿನೈದು ರೂಪಾಯಿ ವಸೂಲುಮಾಡಿದರು. ಲಾ ತಿಳಿದ ನನ್ನ ಸ್ನೇಹಿತನೊಬ್ಬನನ್ನ ವಿಚಾರಿಸಿದೆ. ಅವನೂ ಅದೇ ವಾದ ಹೂಡಿ ನನ್ನಿಂದ ಹೋಟಲಿಗೆ ಎರಡೂವರೆ ರೂಪಾಯಿ ಖರ್ಚುಮಾಡಿಸಿದ.

ಡಾಕ್ಟರನ್ನ ನಾನು ತಿರುಗಿ ಕಂಡಾಗ ಅವರ ಕೇಸುಗಳೆಲ್ಲ ಮುಗಿದಿದ್ದವು. ಸಾಧ್ಯವಾದಷ್ಟು ಗಟ್ಟಲಿ ಅಂದುಕೊಂಡು 20 ರೂಪಾಯಾದರೂ ತಗ್ಗಿಸುವಂತೆ ಕೇಳಿಕೊಂಡೆ. ಸಾಧ್ಯವಿಲ್ಲವೆಂದರು. "ನಿಮಗೆ ಸಂಸಾರ, ಮಕ್ಕಳು ಮರಿ ಇಲ್ಲವೆ? ದಯದಾಕ್ಷಿಣ್ಯ ಇಲ್ಲವೆ" ಅಂದೆ. ಮರುಗಲಿಲ್ಲ. ಕಡೆಗೆ "ನೀವೇನು ಮನುಷ್ಯನೋ ಪ್ರಾಣಿಗವೋ" ಅನ್ನುವಷ್ಟು ಹೋಗಿ, 50 ರೂಪಾಯಿ ಅವರ ಮುಖದ ಮೇಲೆ ಎಸೆದು, "ಇನ್ನು ನನ್ನ ದವಡೆಯ 32 ಹಲ್ಲುಗಳೂ ಹಾಳಾದರೂ ನಿಮ್ಮಂಥವರ ಮೆಟ್ಟಿಲು ಮೆಟ್ಟುವುದಿಲ್ಲ" ಅಂದು ಅವರನ್ನ ಮನಸಾರೆ ಬಯ್ದು ಹೊರಗೆ ಕಾಲು ಹಾಕಿದೆ.

ಮಟಮಟ ಮಧ್ಯಾಹ್ನ. ಮೂರು ಗಂಟೆ. ಜೋಲುಮುಖ ಹಾಕಿಕೊಂಡು ಬಸ್ಸಿನಿಂದಿಳಿದು ಮನೆಯ ಬಾಗಿಲು ಮುಟ್ಟುವ ವೇಳೆಗೆ ಅಜ್ಜಿಯ ಔಷಧದ ಪ್ರಭಾವ ಇಳಿದು, ನನ್ನ ಹಾಳು ಹಲ್ಲು ಯಥಾ ಸಾವಕಾಶವಾಗಿ ತಾಳಹಾಕಲಾರಂಭಿಸಿತ್ತು. ಅದೇ ಸುತ್ತಿಗೆ, ಸ್ಕ್ರೂಡ್ರೈವರ್, ಬೀಸುವಕಲ್ಲು, ಇ. ಇ. !

—ಎಸ್. ಎನ್. ಶಿವಸ್ವಾಮಿ.

---

ಮಹಾ ಸಮ್ಮೇಳನವನ್ನು ಪ್ರಾರಂಭಿಸಲು ಬಂದಿದ್ದ ಮಂತ್ರಿವರ್ಯರಿಗೆ ಅಧ್ಯಕ್ಷರನ್ನೂ ಉಪನ್ಯಾಸಕರನ್ನೂ ಪರಿಚಯ ಮಾಡಿಕೊಡಲಾಯಿತು. ಅನಂತರ, ಅವರು "ಸಭಿಕರೇ ! ನಿಮ್ಮ ಈ ಸಮ್ಮೇಳನವು ಯಶಸ್ವಿಯಾಗಿ ನಡೆಯಲೆಂದು ನಾನು ಭಗವಂತನನ್ನು ಪ್ರಾರ್ಥಿಸುತ್ತೇನೆ" ಎಂದರು.

* * * *



ನಾವು ಸಾಕಿದಷ್ಟು ಪೊಳಿಚಾರ್ ನಾಯಿಗಳನ್ನ ಬೇರೆ ಯಾರೂ ಸಾಕಿರಲಾರರು. ನಮ್ಮ ಮನೆ ಹುಡುಗರಿಗೆ ನಾಯಿಮರಿ ಅಂದರೆ ಅಷ್ಟು ಜೀವಕಾರುಣ್ಯ. ಚರಂಡಿ, ಕಸದ ಡಬ್ಬಿ, ಮುನಿಸಿಪಲ್ ಲಾರಿ, ಹಿತ್ತಲಗಲ್ಲಿ ಎಲ್ಲಿ ಎಂಥ ನಾಯಿಮರಿಯನ್ನ ಕಂಡರೂ ಅವು ಎತ್ತಿಕೊಂಡು ಬಂದು ಹಾಲನ್ನ ಕೊಟ್ಟು ಒಗ್ಗಿಸಿಕೊಂಡು ಬಿಡುತ್ತಿದ್ದುವು. ಬೆಳೆಯುತ್ತ ಬೆಳೆಯುತ್ತ ಅವು ನಾಲಗೆ ತೀಟೆಗಾಗಿ ನಮ್ಮನ್ನು ತೊರೆದು ಎತ್ತೆತ್ತಲೋ ಹೊರಟೇಬಿಡುವುವು. ಯಾವ ನಾಯಿಯೂ ಕೂಡ ಆರುತಿಂಗಳ ಮೇಲೆ ನಮ್ಮ ಮನೆಯಲ್ಲಿ ಉಳಿಯುತ್ತಿರಲಿಲ್ಲ. ನಮ್ಮ ಹುಡುಗರ ಹಿಂಸೆ ಅವೆಲ್ಲಿ ಸಹಿಸೋದು? ದಿನಕ್ಕೆ ನೂರು ಸಲ ಕಿವಿಹಿಡಿದೆತ್ತೋದು, ಬಾಲ ಹಿಡಿದು ಬೀಸೋದು, ಪಕ್ಕೆ ಎಲುಬಿಗೆ ಒದೆಯುವುದು, ಬಿಸಿನೀರು ಚೆಲ್ಲೋದು, ಮೆಣಸಿನಪುಡಿ ತಿಕ್ಕೋದು, ಸೂಜಿ ಚುಚ್ಚೋದು (ಇಂಜೆಕ್ಷನ್ ಆಟ ಎಂಬ ನೆಪದಲ್ಲಿ)—ಹೀಗೆ ಷೋಡಶೋಪಚಾರ ನಡೆಯುತ್ತಿದ್ದರೆ, ಅದರ ಪಾಡು ನಾಯಿಪಾಡು ತಾನೆ? ಕುಯ್ಯೋ ಅಂತ ಅದು ಕಿರಿಚಿದರೆ, ನಮ್ಮ ಹುಡುಗರು ಕುಯ್ದೇ ಬಿಡುವರು, ಕೀವೀನ! ಲೊಳ್ ಅಂತ ಬೊಗುಳಿದರೆ, ಅವರು ಗೊಳ್ ಅಂತ ನಗುವರು. ಹೀಗಾಗಿ, ನಮ್ಮ ಮನೆಯಿಂದ ಐವತ್ತು ಅರವತ್ತು ನಾಯಿಗಳು ಸತ್ತೆನೋ ಕೆಟ್ಟೆನೋ ಅಂತ ಕಂಬಿ ಕಿತ್ತಿವೆ.

ಆದರೆ, 'ಜಿಲ್ಲಿ' ಮಾತ್ರ, ಬಂದದ್ದೆಲ್ಲ ಬರಲಿ, ಅದೇ ಉಂಡೇನು ಕದದಾಚೆ ಹೋಗೋಲ್ಲ, ಅಂತ ನಮ್ಮನ್ನೇ ಪಟ್ಟಾಗಿ ಹಿಡಿದು ಬಿಟ್ಟಿದೆ. ಜಿಲ್ಲಿಯ ತಾಯ್ತಂದೆಯರು ಸತ್ಕುಲಪ್ರಸೂತರಾಗಿ, ಶ್ರೀಮಂತ ಮನೆತನದವರಾಗಿದ್ದಿರಬೇಕೆಂದು ಅದರ ಚಿತ್ರವೇ ಹೇಳುತ್ತದೆ. ಆದರ ಅಂಗಾಂಗ ವಿವರಣೆಯೂ ಅನವಶ್ಯಕ. ಅವನನ್ನೆತ್ತಿಕೊಂಡು ಬಂದದ್ದು ನಮ್ಮ ಪುಟ್ಟ ಶೀನು. ಸ್ಕೂಲಿಂದ ಬರುವಾಗ ಪುಸ್ತಕಗಳ ಜೊತೆ, ಚೀಲದಲ್ಲಿ. ಮರುದಿನ ಅವನಿಗೆ ಬೇರೆ ಹೊಸ ಪುಸ್ತಕಗಳನ್ನು ಕೊಂಡುಕೊಡಬೇಕಾಯಿತು, ಅಷ್ಟೆ. ಪಾಪ! ಜಿಲ್ಲಿಗೆ ಅಜೀರ್ಣ ಅಂತ ಪುಟ್ಟ ಶೀನುವಿಗೆ ಹೇಗೆ ಗೊತ್ತಾಗಬೇಕು!

ಅಂದಿನಿಂದ ಜಿಲ್ಲಿ ನಮ್ಮ ಮನೆಗೆ ಅನ್ನ ಕಂಟಕ. ನಮ್ಮ ಹುಡುಗರು ಅದರ ತಂಟೆಗೆ ಹೋಗದಿರಲು ಅದು ತಕ್ಕ ರಕ್ಷಣಾ ವಿಧಾನವನ್ನು ಮೊದಲಿಂದಲೂ ಮಾಡಿಕೊಂಡಿದೆ. ನಮ್ಮ ಮನೆಯಲ್ಲೇ ಇದ್ದರೂ ಅದರ ದೃಷ್ಟಿಯಲ್ಲಿ ನಾವೂ ಒಂದೇ, ಹೊರಗಿನವರೂ ಒಂದೇ. ಎಲ್ಲರನ್ನೂ ನಿಷ್ಪಕ್ಷಪಾತದಿಂದ ಅದು ಕಚ್ಚುವುದು. ನೋಡಿದರೆ, ಸದಾ ನೆಗಡಿ ಹಿಡಿದು ಶುನಶ್ಶೇಫನ ಹಾಗಿರುವುದು. ಆದರೆ, ಪಾಪ, ಅಂತ, ಯಾವನಾದರೂ ಅದರ ಮೂಗು ಒರಸುವುದಕ್ಕೆ ಹೋದರೆ, ಗಬಕ್ ಅಂತ ಅರ್ಧ ಪೌಂಡ್ ಮಾಂಸವನ್ನ ಬೇರ್ಪಡಿಸಿಯೇ ಬಿಡುವುದು. ಇನ್ನು ಅದರ ಬಾಲಹಿಡಿಯುವವರಾರು? ಕಿವಿ ಹಿಂಡುವವರು ಯಾರು?

ನಮ್ಮ ಮನೆಯಲ್ಲಿ ಜಿಲ್ಲಿ ಎಲ್ಲರನ್ನೂ ಕಚ್ಚಿದೆ; ಅವಳನ್ನೂ ಬಿಟ್ಟಿಲ್ಲ. ಅವತ್ತು ನಮ್ಮಮನೆಗೆ ಯಾರೋ ನಾಲ್ಕು ಜನ ಊಟಕ್ಕೆ ಬಂದಿದ್ದರು, ಅಡಿಗೆ ಮನೆ ಉಗ್ರಾಣ ಊಟದಕೋಣೆ ಎಲ್ಲ ಇಲಿಗಳ ಅವಾಂತರ; ಬೊಮ್ಮನಹಳ್ಳಿಗಿಂತ ಎರಡರಷ್ಟು ಹಾವಳಿ. ಹಾಳು ಜಿಲ್ಲಿ ಒಂದನ್ನಾದರೂ ಗಬಕ್ ಅನ್ನಲಿಲ್ಲವಲ್ಲ, ಅಂತ ಅವಳಿಗೆ ಕೋಪ. ಅವರಿಗೆ ಊಟಕ್ಕೆ ಬಡಿಸುವ ಮೊದಲು ಉಗ್ರಾಣದಲ್ಲಿ ದೊಡ್ಡ ತಟ್ಟೆ ಇಟ್ಟು ಇಲಿಗಳೆಲ್ಲ ಅಲ್ಲಿಗೆ ಬರಲಿ ಅಂತ ಅವಳು ಅವುಗಳಿಗಾಗಿ ಚಕ್ಕುಲಿ ಕೋಡುಬಳೆ ಹಪ್ಪಳ ಸಂಡಿಗೆ ಭರ್ತಿಮಾಡಿದ್ದಳು. ಜಿಲ್ಲೀನೂ ಅಲ್ಲೇ ಇತ್ತು; ಇಲಿಗಳ ಸಂಗಡ ಚಕ್ಕಂದವಾಡುತ್ತ, ಹೊಸಬರ ಕಾಲು ಬಾಯಿಗೆ ಸಿಕ್ಕಲಿಲ್ಲವಲ್ಲಾ ಅಂತ ಗೊಣಗುತ್ತ ಕೂತಿತ್ತು ಜಿಲ್ಲಿ!........ಬಡಿಸುವ ನಡುವೆ ಅವಳು ಒಂದುಸಾರಿ ಬಿಳಿ ಉಪ್ಪಿಗೆ ಅಂತ ಉಗ್ರಾಣಕ್ಕೆ ಕಾಲಿಟ್ಟಳು. ಬೆಳೆದ ಕೋಪದಲ್ಲಿ ಜಿಲ್ಲಿ ಅವಳನ್ನು ಕಚ್ಚೇ ಬಿಟ್ಟಿತು........ ಆಮೇಲೇನೋ ಮುಖಾನ ನೆಗಡಿಮುಖಮಾಡಿಕೊಂಡು ಮೂಗಿಂದ ಪಶ್ಚಾತ್ತಾಪದ ಬೆವರು ಸುರಿಸಿತಂತೆ, ಅವಳು ಹೇಳುತ್ತಾಳೆ. ನನಗೆ ನಂಬಿಕೆ ಇಲ್ಲ ಜಿಲ್ಲಿ ಪಶ್ಚಾತ್ತಾಪ ಪಡುತ್ತೆ ಅಂತ. ಬೂದೀಲಿ ಹೊರಳಾಡುವಾಗ ಎಲ್ಲ ನಾಯಿಗಳಿಗೂ ವೈರಾಗ್ಯ ಉತ್ಪತ್ತಿಯಾಗುತ್ತದಂತಲ್ಲಾ!

ಸಂಕ್ರಾಂತಿ ಹಬ್ಬದ ದಿನ ಅವಳು ನಮ್ಮ ಜಿಲ್ಲಿ ಕಚ್ಚಿದ ಹೆಂಗಸರ ಮನೆಗಳಿಗೂ ಎಳ್ಳು ಬೀರುವಳು; ಜೊತೆಗೆ, ಒಂದೊಂದು ಬೆಳ್ಳಿ ಬಟ್ಟಲನ್ನೂ ಕೊಟ್ಟು ಬರುವಳು, ಅವರ ಆತ್ಮ ಶಾಂತಿಗಾಗಿ. ಸುಮಾರು ನಲವತ್ತು ನಲವತ್ತೆಂಟು ಬಟ್ಟಲುಗಳು ಖರ್ಚಾಗುವುದು. ಐದಾರು ಬಾರಿ ನಮ್ಮ ಬೀದಿಯವರು ಜಿಲ್ಲಿಗೆ ವಿಷ ವುಣಿಸಲು ಪ್ರಯತ್ನಪಟ್ಟಿದಾರೆ. ಆದರೆ, ಶ್ವಭ್ಯಃ ಶ್ವಪತಿಭ್ಯಶ್ಚ ನಮೋನಮಃ ....ಜಿಲ್ಲಿ ಇನ್ನೂ ಬದುಕಿದೆ. ಎಂಥ ವಿಷವಾದರೂ ಅದನ್ನು ಕಾರುವ ಶಕ್ತಿ ಅದಕ್ಕೆ ಕಾಲಭೈರವನೇ ಒದಗಿಸಿದಾನೆ. ನನ್ನ ವೋಟು ಕೇಳುವುದಕ್ಕೆ ಅಂತ, ಎಚ್ಚರಿಕೆ ಬೋರ್ಡನ್ನು ದಾಟಿ ಒಳಕ್ಕೆ ಬಂದ ಒಬ್ಬ ಅಸೆಂಬ್ಲಿ ಮೆಂಬರನ್ನ ಜಿಲ್ಲಿ ಗಬಕ್ ಅಂತ ಕಚ್ಚೇ ಬಿಡ್ತು. ಅದರ

ರಾಜಕೀಯ ಪರಿಜ್ಞಾನ ಅಷ್ಟು ಪರಿಷ್ಕಾರ ವಾಗಿದೆ ಎಂಬುದನ್ನರಿತು ನನಗೆ ಪರಮ ಸಂತೋಷವಾಯಿತು. ಅವರು ಡಿಪಾ ಸಿಟ್ ಕಳೆದುಕೊಂಡಾಗ, ನಾನು ಅವ ರನ್ನು ಮನೆಗೆ ಊಟಕ್ಕೆ ಕರೆದಿದ್ದೆ. ಆದರೆ, ಹೇಡಿ, ಊಟಕ್ಕೆ ಚಕ್ಕರ್ ಕೊಟ್ಟ.

ಜಿಲ್ಲಿಗೆ ಅನ್ನ ಹಾಕುವ ಕೆಲಸವನ್ನು ಸರದಿಮೇರೆ ಮನೆಯಲ್ಲಿರುವವರೆಲ್ಲರೂ ನಿರ್ವಹಿಸುವೆವು–ಅದಕ್ಕೆ ಎಲ್ಲರಮೇಲೂ ಸಮವಾದ ಪ್ರೀತಿ ಬರಲಿ, ಅಂತ. ಆದರೆ, ಆ ಉಪಾಯ ಫಲಕಾರಿಯಾಗಲಿಲ್ಲ. ಎಲ್ಲ ನಾಯಿಗಳೂ ಊಟವಾದ ಮೇಲಾ ದರೂ ಬಾಲವಾಡಿಸುತ್ತ ಕೈನೆಕ್ಕುತ್ತವೆ. ಆದರೆ, ಜಿಲ್ಲಿ ಹಾಗಲ್ಲ. ಊಟವಾಯಿ ತೆಂದರೆ, ಅದಕ್ಕೆ ಹಲ್ಲು ಕೆರೆತ ಜಾಸ್ತಿ. ಒಂದು ದಿನ, ಅದರ ತಟ್ಟೆ ಖಾಲಿಯಾದ ಕೂಡಲೇ ಅದು ನನ್ನನ್ನ ಓರೆ ಕಣ್ಣಿಂದ ನೋಡಿತು. ನಾನು ನೆಗಡಿ ಸಂಕಟ ಅಂತಿದ್ದೆ. ಆದರೆ, ಅದು ನನ್ನ ಕಾಲನ್ನೇ ದುರುಗುಟ್ಟಿದಾಗ, ನಾನು ಕಿಟ್ರೋ ಅಂತ ಮೇಜಿನಮೇಲಕ್ಕೆ ಹಾರಿ, ನಿಂತೆ. ಜಿಲ್ಲೀನೂ ನನ್ನ ಹಿಂದೆ ಹಾರಿತು. ಆದರೆ, ಎಷ್ಟಾದರೂ, ನಾಯಿ! ಮೇಜಿನ ಆಚೆ ನೆಲದಮೇಲೆ ಕುಸಿದು ಬಿತ್ತು. ಅಷ್ಟರೊಳಗೆ ನಾನು ಮೇಜಿನಮೇಲೆ ಹರವಿದ್ದ ಬಟ್ಟೆಯನ್ನು ಎಳೆದು ಅದರ ಮುಖದಮೇಲೆ ಎಸೆದೆ. ಅದನ್ನೇ ಸುತ್ತಿ ಬಿಗಿ ಹಿಡಿದು ಸರಪಣಿ ಬಿಗಿದು ಕಂಬಕ್ಕೆ ಕಟ್ಟಿದೆ.

"ನೆಗಡಿ, ಪಾಪ, ಜಿಲ್ಲಿಗೆ! ಅದ ನ್ನೇನು ಗೋಳು ಹೊಯ್ಕೋತ್ತೀರಿ" ಎಂದು ಕೇಳುತ್ತ, ಅವಳು ಒಳಗಿಂದ ಬಂದಳು.

....ಗಂಗಾಧರ.

——o——

ಆಗಸ್ಟ್ 15 ನೇ ತಾ॥ನ ಅನಂತರವೂ ಏ. ಐ. ಆರ್. ಕೇಂದ್ರಗಳಿಂದ ಸ್ವಾತಿ ತಿರುನಾಳ್ ಕೃತಿಗಳನ್ನು ಸಂಗೀತಕಾರರಿಂದ ಹಾಡಿಸಲಾಗುವುದಂತೆ ...ತಿರುವಾಂಕೂರಿನ ಮೇಲಿನ ತೀವ್ರ ಕಾರ್ಯಕ್ರಮಗಳಲ್ಲಿ ಅದೂ ಒಂದು ಎಂದು ಸರ್. ಸೀ. ಪಿ. ಅವರು ಭಾವಿಸುವುದಿಲ್ಲ, ತಾನೆ?

* * * *

# ಇಂದಿನ ಗಾದೆಗಳು

---

ಕನ್ನಡಿ ಒಳಗಿನ ಗಂಟಿಗಿಂತ, ಕನ್‌ಸಾಂಬ್ಲಿ ಒಳಗಿನ ಗಂಟೇ ವಾಸಿ

ಕೊಳ ಚೆಲ್ಲಿದರೆ, ಕೂಗೋರು ಸಿಕ್ತಾರೆ.

ಪಾಕಿಸ್ತಾನದ ಗೊಡವೆ ಬಾಕಿ ಸ್ಥಾನಗಳಿಗೇಕೆ ?

ಸಿಂಧು ಹೋದರೂ, ಬಂಧು ಹೋದೀತೆ ?

ಬೆಕ್ಕಿಗೆ ಬೇರೆ ದೇಶ ಸಿಕ್ಕರೆ, ಇಲಿ ಹೆಗ್ಗಣವಾಗಬೇಕೆ ?

ಗಾಂಧಿ ಮುಪ್ಪಾದರೂ ಕ್ರಾಂತಿ ಒಪ್ಪಲಾರ

ಸಾಹೇಬರಿಗೇಕೆ ಸಮತಾಕ್ರಾಂತಿ ?

ಸಾವಿರ ಹೆಟ್ಟಿಗೆ ಒಂದು ಸ್ವತಂತ್ರಸ್ಥಾನ

ಹೋರಿ ಬಾಳುವುದಕ್ಕಿಂತ, ಬೇರೆ ಬಾಳುವುದು ಲೇಸು

ಹೋಗ್ತಾ ಹೋಗ್ತಾ, ಹೊಗೆ ಹಾಕೋದೆ ?

ಸಮುದ್ರ ತೀರ ಇದೆ, ಅಂತ, ಉಪ್ಪುನೀರು ಕುಡಿದ.

ಅಟ್ಲಿಯೊಚಾರ್ ಪುರಾಣ, ಬಿಟ್ಟಲ್ಲಿಗೆ ಸಮಾಪ್ತಿ.

ಸತ್ಯಕ್ಕೆ ನಡೆದವನ ಮೈ ಬೆತ್ತಲೆ

ಸಂಜೆ ಹೊತ್ತಿಗೆ, ಮೂರು ತುಂಡು

ಕಣ್ಣು ಕಾಣದವರಿಗೆ ಕಣ್‌ಸಾಂಬ್ಲಿ ಏಕೆ ?

ಪ್ರಯಾಸಪಡದೆ, ಪ್ರಥಮಸ್ಥಾನ ಸಿಕ್ಕಿತು.

ಲಾಯರನ್ನು ನೆಚ್ಚಿ, ಪಾಯವೇ ಕುಸಿಯಿತು.

—o—

# ಮೀನಾಕ್ಷಿಯ ಸೌಗಂಧ



ರಾಗ—ಮಾಯಾಮಾಳವ ಗೌಳ

ಗೌರೀ ಪೂಜೆಯ ಗೊಡವೆಯು ದುಃಖ ಗಂಡಸಿಗೇತಕ್ಕೆ
ಆನೆಯ ಮೂತಿಯ ಗಣಪನ ದುಃಖ ಹೆಂಗಸಿಗೇತಕ್ಕೆ

ಈಳಿಗೆ ಮಣೆಯಲಿ ತರಕಾರಿಯನು
ಪಲ್ಯಕೆ ಕೊಯ್ಯುವ ಹೆಣ್ಣಿನ ದುಃಖ
ಗಂಡಸಿಗೇತಕ್ಕೆ

ಕ್ಷೌರೀಕಾನಾ ಕತ್ತಿಯ ಹಿಡಿದು
Section ತೆಗೆಯುವ botany ದುಃಖ
ಹೆಂಗಸಿಗೇತಕ್ಕೆ

Mysore Sandal Soap ಇನಮೇಲೆ
ಮುಖವನು ತಿಕ್ಕುವ ಹೆಣ್ಣಿನ ದುಃಖ
ಗಂಡಸಿಗೇತಕ್ಕೆ

Microtomಇನ bladeನು ತೊಗಲಿನ
stropಇನಮೇಲೆ ಉಜ್ಜುವ ದುಃಖ
ಹೆಂಗಸಿಗೇತಕ್ಕೆ

ತೊಟ್ಟಿಲ ತೂಗುವ ಗೌರಿಯು ದುಃಖ ಗಂಡಸಿಗೇತಕ್ಕೆ
ಮನೆಯ ಹೊರಗಿರುವ botany ದುಃಖ ಹೆಂಗಸಿಗೇತಕ್ಕೆ

ರಾಗ—ಮಾಂಡ್

ಮೂರು ತಿಂಗಳಿಗೆ ಮೀನಾಕ್ಷೀ
ಮಾಮಾ ಎಂದಳು ಮೀನಾಕ್ಷೀ

ಆರು ತಿಂಗಳಿಗೆ ಮೀನಾಕ್ಷೀ
ಅಮರವ ಕಲಿತಳು ಮೀನಾಕ್ಷೀ

ಹತ್ತು ತಿಂಗಳಿಗೆ ಮೀನಾಕ್ಷೀ
ಗುರುತಿಸಿದಳು ಹೂ ರುದ್ರಾಕ್ಷೀ

ಒಂದು ವರ್ಷದಲಿ ಮೀನಾಕ್ಷೀ ಮಾತಿನಮಣಿಮಾಲೆ
ಹೆತ್ತವರಿಂಗೆ ಅಂದೇ ಆದಳು ಅವರ ಕಂಠಮಾಲೆ

ಹಬ್ಬಿತು ಹಬ್ಬಿತು ಊರಿನಲೆಲ್ಲಾ ಮೀನಾಕ್ಷಿಯ ಬುದ್ಧಿ
ಮನೆಮನೆಯಲ್ಲೂ ಮಾತೇ ಆಯಿತು ಮೀನಾಕ್ಷಿಯ ಸುದ್ದಿ.

ರಾಗ—ಆರಭಿ

ಎರಡು ವರ್ಷಗಳು ತುಂಬಿತು ನಮ್ಮ ಮೀನಾಕ್ಷೀಮಣಿಗೆ
ಅಪ್ಪನು ತಂದನು ಬಾಲಬೋಧೆಯನು ಓದಲು ಆವಳಿಂಗೆ

ಬಾಳೆಯತೋಟ, ತೆಂಗು, ಕವಂಗು ಪಾಠಗಳೆಲ್ಲವನೂ
ಎರಡು ದಿನಗಳಲಿ ತಿರುವಿ ಹಾಕಿದಳು ಎಲ್ಲ ಪುಟಗಳನ್ನೂ

ಹೂ, ಮರ, ಬಳ್ಳಿ, ಗಿಡ, ಕಾಯಿಗಳ ಹೆಸರುಗಳಷ್ಟನ್ನೂ
ಹಗಲೂ ರಾತ್ರಿ ಎಡಬಿಡದೋದುತ ಹೊಡೆದಳು ಉರುವನ್ನೂ

ಮಲ್ಲಿಗೆ, ಮಲ್ಲೆ, ಸಂಪಗೆ, ಗುಲಾಬಿ ಹೆಸರುಗಳಷ್ಟನ್ನೂ
ಯಾವುದು ಯಾವುದು ಎಂಬರಿವಿಲ್ಲದೆ ಹೊಡೆದಳು ಉರುವನ್ನೂ

ಅಪ್ಪನಿಗಾಯಿತು ಅತ್ಯಾಶ್ಚರ್ಯ ಮಗಳ ಸ್ಫೂರ್ತಿ ನೋಡಿ
ಅಮ್ಮನಿಗಾಯಿತು ಮನಸ್ಸಿನಲ್ಲಿ ಆನಂದದ ಕೋಡಿ

ಊರುಗಳಿಂದ ಊರಿಗೆ ಹಬ್ಬಿತು ಮೀನಾಕ್ಷಿಯ ಖ್ಯಾತಿ
ಗಾಳಿಯ ವೇಗವ ಮೀರಿಸಿ ಹಾಯಿತು ಮೀನಾಕ್ಷಿಯ ಕೀರ್ತಿ

ತಗ್ಗೇ ಇಲ್ಲದೆ ಹಿಗ್ಗುತ ಬೆಳೆದಳು ಖ್ಯಾತಿಯ ದೋಣಿಯಲಿ
ಮೆಟ್ಟೇ ಇಲ್ಲದೆ ಎತ್ತರ ಬೆಳೆದಳು ಜಂಭದ ಏಣಿಯಲಿ.

ರಾಗ—ಹಂಸಧ್ವನಿ

ಒಂಭತ್ತು ವರ್ಷಕೆ Lower Secondary ತಂದನ ತಾನಾನಾ
ಹೊಡೆದಳು ಗಿರ್‍ರ‍ನ I class ಇನಲಿ ,,

ಹನ್ನೆರಡು ವರ್ಷಕೆ S. S. L. C. ,,
ತೆಗೆದಳು ಭರ್‍ರ‍ನೆ I class ಇನಲಿ ,,

ನೆಗೆದಳು ಮೇಲಕೆ ಅಲ್ಲಿಂದ ,,
ಮುದ್ದಿನ ಕುರಿಮರಿ ನೆಗೆದಂದ ,,

ಹತ್ತಿದಳು ಮೀನಾಕ್ಷಿ Intermediaಟ್ಟ ,,
ದಾಟಿದಳು I rank ಇನಲಿ ಆಫಟ್ಟ ,,

ಏನಹೇಳಲಿ ನಾ ಮೀನಾಕ್ಷಿಯ ದಿಟ್ಟ ,,
ಬಂದಿತವಳಿಗೆ ಕೋಳಿ ಜಂಭದ ಪಟ್ಟ ,,

ರಾಗ—ಸಹನ

ಮುಂದಕೇನು ತಾ ಮಾಡುವುದೊ, ಯಾವುದು Subject ಓದುವುದೊ,
ಯಾವ ಸಂಸ್ಥೆಗೇ ಸೇರುವುದೊ, ಯಾವ ಪರೀಕ್ಷೆಗೆ ಕೂಡುವುದೊ
ಈ ಯೋಚನೆಗಳೆ ತುಂಬಿವೆ ನಮ್ಮ ಮೀನಾಕ್ಷೀಮಣಿ ತಲೆಯಲ್ಲಿ
ಬೇರೆಯೋಚನೆ ಯಾವುದು ಇಲ್ಲ ತಂದೆತಾಯಿಯರ ಮನದಲ್ಲಿ

" ಅಪ್ಪ, ನಾ botany ಯೋದುವೆನು
ಸಹಪಾಠಿಗಳನು ಮೆಟ್ಟುವೆನು
ಓದೀ ಓದೀ ಓದೀ ಓದೀ
ತೆಗೆಯುವೆ 1st in 1st class ಅ

ನಾಳೆಯಿಂದಲೇ ಆ ಸಂಸ್ಥೆಗೆ ನಾ ಹೋಗಿ ಸೇರುವೆನು
ಬೇಗನೆ ತರುವೆನು ಪುಸ್ತಕವನ್ನು ಹೊಡೆವೆನು ಉರುವನ್ನು "

ಮಗಳೆ ಮಾತಕೇಳಿ
ತಂದೆ ತಲೆಯದೂಗೆ
ಮಗಳ ಮಾತ ಕೇಳಿ
ತಾಯಿ ನಗುವ ಬೀರಿ
ಎದ್ದು ಹೊರಟಳು ಮುದ್ದಿನ ಮಿಾನು ಝೋಕಿನ ಠೀವಿಯಲಿ.

ರಾಗ—ಮೋಹನ

ಜರತಾರಿ ಸೀರೆಯ ನಿರಿಯನು ಚಿಮ್ಮುತ ಬಂದಳು ಮಿಾನಾಕ್ಷೀ
ಬಾಟನಿ ಸಂಸ್ಥೆಯ ಹೊಸ್ತಿಲದಾಟುತ ಬಂದಳು ಮಿಾನಾಕ್ಷೀ
ಪುಸ್ತಕ ಹೊರೆಯನು ಕೈಯಲ್ಲಿ ಹೊತ್ಕೊಂಡು ಬಂದಳು ಮಿಾನಾಕ್ಷೀ
ತೆರೆದಿದ್ದ microscopಇನ tubeನು ಜಜ್ಜುತ ಮಿಾನಾಕ್ಷೀ
Box ಇನ ಮುಚ್ಚಳ ತೆಗೆಯುತ microscopeನು ನೂಕಿದಳು
ಮುಚ್ಚಳಮುಚ್ಚಿ ಬೀಗವ ಹಾಕಿ ಕೆಳಗಡೆ ತಳ್ಳಿದಳು
ತಳ್ಳಿದ್ದೇ ತಡ ಓದಲು ಕುಳಿತಳು ಪುಸ್ತಕದೆದುರಲಿ ಮಿಾನಾಕ್ಷೀ
ಓದಿದ್ದೇತಡ ಉರುವನು ಹೊಡೆದಳು ಉರುವಿನ ರಾಣಿ ಮಿಾನಾಕ್ಷೀ



ಇತ್ತ ಬಂದನು ಬೇರೊಬ್ಬನಾತಾ ತಂದಾನಾ ನಾ ನಾ
Botany ಯೋದುವ ಸಹ ಪಾಠೀಯ ,,
Microscopಇನ ಎದುರಲಿ ಕೂತನು ,,

Microscop ಅಲಿ ನೋಡುವನು ತಂದಾನಾ ನಾ ನಾ
ಮಧ್ಯೆಮಧ್ಯೆ ತಾನೋದುವನು ,,
ಏನನೊ ಯೋಚನೆಮಾಡುವನು ,,
Microscop ಅಲಿ ಇಣುಕುವನು ,,
ಮತ್ತೆ ಪುಸ್ತಕವ ತೆರೆಯುವನು ,,
ಓದಿದ್ದನ್ನು Microscop ಅಲಿ ,,
ತಿರುಗಿ ತಿರುಗಿ ಗುರುತಿಸುವಾನು ,,
ಪುಸ್ತಕದಲ್ಲಿನ ಪಾಠಗಳನ್ನು ,,
Slide ನಲ್ಲಿರುವ ಗುಟ್ಟುಗಳನ್ನು ,,
ಒಂದಕ್ಕೊಂದನು Compare ಮಾಡುವ ,,

ರಾಗ—ಲಾವಣಿ ಮಟ್ಟು

ಕಳೆದುವು ಆರೂ ವರ್ಷಗಳಿಂತು botany ಪಾಠದ ಸರಣಿಗಳು
ಮೀನಾಕ್ಷೀಯೂ ಪಾಠಗಳೆಲ್ಲವು ಪುಸ್ತಕದೊಳಗಿನ ಪಾಠಗಳು
ಪ್ರಕೃತಿಯು ಪಾಠ ಒಂದಿಷ್ಟಿಲ್ಲ ಎಲ್ಲವು ಪುಸ್ತಕ ಪಾಠಗಳು
Practicalನ outlook ಇಲ್ಲ ಎಲ್ಲವು ಪುಸ್ತಕ ಪಾಠಗಳು
ಸಹಪಾಠೀಯೂ ಪಾಠಗಳೊಡನೆಯೆ ಪ್ರಕೃತಿಯು ಪಾಠಗಳು
ಕಳೆದುವು ಆರೂ ವರ್ಷಗಳಿಂತೂ botany ಪಾಠದ ಸರಣಿಗಳು
ಆರುವರ್ಷಗಳ ಕೊನೆಯಲಿ ಕುಳಿತರು ಇಬ್ಬರು ಒಂದೇ ಪರೀಕ್ಷೆಗೆ
ಝೋಕಿನಿಂದಲೇ ಇಬ್ಬರು ಕುಳಿತರು ಟೊಳ್ಳು-ಗಟ್ಟಿಗಳ ಪರೀಕ್ಷೆಗೆ

ಪರೀಕ್ಷೆಮುಗಿಯಿತು resultಉ ಬಂದಿತು ಆಹಾ ಹಾಹಾಹಾ !
ಮೀನಾಕ್ಷೀಗೆ Province 1st ಆಹಾ ಹಾಹಾಹಾ !
ಸಹಪಾಠೀಗೆ ಮೂರನೆ classಉ ಆಹಾ ಹಾಹಾಹಾ !
Convocationಊ ಒಡನೆಯೆ ಬಂದಿತು ಆಹಾ ಹಾಹಾಹಾ !

ರಾಗ—ಕೇದಾರಗೌಳ

Convocationನಲಿ ಕುಳಿತಿಹರಿಬ್ಬರು ಮೀನಾಕ್ಷೀ ಮೇಣ್ ಸಹಪಾಠೀ
ನೆರೆದಿಹರೆಲ್ಲರು ಕೌತುಕದಿಂದ ಸುಸಮಾರಂಭವನೀಕ್ಷಿಸಲು

ಎದ್ದು ಬಂದ ತಾ ಅಧ್ಯಕ್ಷನು ತಾ ತನ್ನ ಜಾಗದಿಂದಾ
ಕೈಯಲಿ ಹಿಡಿಯುತ ಕಿರೀಟ ಬಂದನು ಬಹಳ ಠೀವಿಯಿಂದಾ
ನಡದನು ಮೀನಾಕ್ಷಿಯಾ ಬಳಿಗೆ ಬಹಳ ಬಿಗುವಿನಿಂದಾ
ಕಣ್ಣುಗಳಲ್ಲಿ ಹರುಷವ ಸೂಸುತ ನುಡಿದ ಹೆಮ್ಮೆಯಿಂದಾ

ರಾಗ—ಮಾಂಡ್

ನೀನೇ ಸರಸತಿ ಮೀನಾಕ್ಷೀ
ನೀನೇ ಶಾರದೆ ಮೀನಾಕ್ಷೀ
ನಿನ್ನ ಬುದ್ಧಿಯಿನ್ನಾರ್ಗುಂಟು
ನಿನ್ನ ಮೆದುಳು ಮತ್ತಾರ್ಗುಂಟು
ತಂದಿಹೆ ಕಿರೀಟ ನಿನಗಾಗೀ
ನಿನ್ನ ವಿದ್ಯಕೆ ಮುಡಿಪಾಗೀ
ಒಪ್ಪಿಸುವೆನಿದನು ಮೀನಾಕ್ಷೀ
ಬಾಳು ಅನಾದಿಗೆ ಮೀನಾಕ್ಷೀ

ರಾಗ— ಆರಭಿ

ಮುಂದಿನ ಸರದಿಯು ಬಂದಿತು ತಂದೆಗೆ ಮೀನಾಕ್ಷೀಮಣಿಯಾ
ಹೆಮ್ಮೆಯು ತಂದೆಗೆ ತಲೆಮೇಲೆದ್ದಿತು ಹೇಳಲೆಂತು ಗೆಣೆಯಾ
ತನ್ನ ಮಗಳು ತಾ ಮಹಾಸರಸ್ವತಿ ಎಂಬ ಜಂಭದಿಂದಾ
ಅವಳಿಗೊಂದು ನಾ ರೆಕ್ಕೆಯ ನೀಡುವೆನು ಎಂದು ಅದನು ತಂದಾ
ಅವಳ ಪಕ್ಕಕೆ ಪರಿಧಾವಿಸಿದನು ರೆಕ್ಕೆಯ ಸೆಕ್ಕಿದನು
ಅದರ ಚೆಂದವನು ನೋಡುತ ನಿಂದು ಬಹಳ ಮೆಚ್ಚಿದಾನು
ಇದನು ನೋಡಿದ ಮೀನಾಕ್ಷಿಯು ತಾಯ್ ಸುಮ್ಮನೆ ಕುಳಿತಿಹಳೆ
ಒಡನೆಯೆ ತಂದಳು ಎರಡನೆ ರೆಕ್ಕೆಯ ಮುದ್ದುಮಗಳ ಬಳಿಗೆ
ಮುದ್ದಿನ ಮೀನಾಕ್ಷೀಯಾ ಬಳಿಗೆ ಬಂದಳಂದದಿಂದ
ಸೆಕ್ಕಿದಳದನು ಮೀನಾಕ್ಷಿಯಾ ಭುಜಕೆ ಚೆಂದದಿಂದ

ರಾಗ—ಬೇಹಾಗ್

ಮೂವರು ಒಟ್ಟಿಗೆ ಸರಿದರು ಹಿಂದಕೆ ಮೆಲುಮೆಲು ನಡೆಯಿಂದ
ಕಣ್ಣುಗಳರಳಿಸಿ ಬೊಕ್ಕೆಬಾಯನು ತೆರೆದ ಚೆಂದದಿಂದ
ತಾವೇ ಮಾಡಿದ ಸರಸತಿದೇವಿಗೆ ಮಣಿದರು ಮೂವಾರೂ
ಮಹಮಾತಾಯೀ ಮಣಿವೆವು ಮಣಿವೆವು ಮಣಿದರು ಮೂವಾರೂ
ಎದ್ದರು ಮೂವಾರೂ
ತಿರುಗಿ ನೋಡಿದಾರೂ
ಸಹಪಾಠೀಯಾ ಇರುವನ್ನೂ

ತಿರುಗಿ ನೋಡಿದಾರೂ
ಅಧ್ಯಕ್ಷಾನೂ ಫಕ್ಕನೆ ತೆಗೆದನು ಜೋಬಿನಿಂದ ಚಿಪ್ಪೊಂದನ್ನೂ
" ಎಲವೋ, ರಾಯಾ, Third class ಈಗೇ
ತೆಗೆದುಕೊ ನೀನೀ cup ಅನ್ನು"
ಎನುತಕೊಟ್ಟ ಚಿಪ್ಪ,
ಕೊಬರಿ ತೆಗೆದ ಚಿಪ್ಪ,
ಚಿಕನಾಯಕನಾ ಹಳ್ಳಿಲಿ ಬೆಳೆಯುವ ತೆಂಗಿನ ಕರಟದ ಕಪ್ಪ.

ಲಾವಣಿ ಮಟ್ಟು

ಮುಂದಿನ ಕತೆಯನು ಹೇಳುವೆ ಜನರೆ ಆಲಸವಿಲ್ಲದೆ ಕೇಳುವಿರೆ ?
ಇಬ್ಬರ ಭವಿಷ್ಯ ಹೇಗೇಗಾಯಿತು ಎಂಬುವ ಪರಿಯನ್ನು ನೋಡುವಿರೆ ?
ಸಹಪಾಠೀಯ ತಲೆಯಲಿ ಮೂಡಿತು ತೆಂಗಿನ ಕರಟದ ಸಂತೃಪ್ತಿ
ನೈಸರ್ಗಿಕದಾ ಗುಟ್ಟುಗಳೆಲ್ಲವು ಆಯಿತು ಅವನಿಗೆ ಸಂಪ್ರಾಪ್ತಿ.

ರಾಗ—ಮಾಂಡ್

ಸಾವಿರಯೋಚನೆ ಮಾಡಿದನು
ಪ್ರಕೃತಿಯ ಚಿಂತನೆ ಮಾಡಿದನು
ಮನದಲಿ ಸ್ಥೈರ್ಯವ ಮೂಡಿದನು
ಹಟದ ಕಂಕಣವ ಕಟ್ಟಿದನು
ನೀಲಗಿರಿಯ ಸುಳಿದಾಡಿದನು
ಹಾವು leach ಉಗಳ ಲೆಕ್ಕಿಸನು
ಕಾಡುಮೇಡುಗಳ ಸುತ್ತಿದನು
ಪ್ರಕೃತಿಯ ಪರಿಚಯ ಮಾಡಿದನು.

ಲಾವಣಿ ಮಟ್ಟು

ಕಾಲೇಜಿನಲ್ಲಿ ಓದಿದುದೆಲ್ಲವ ಮನಸ್ಸಿನಲ್ಲಿಯೆ ಗಣಿಸಿದನು
ಅದಕೂ ಪ್ರಕೃತಿಯ ಪಾಠಕು ದೊರಕುವ ಅಂಶರವೆಲ್ಲವಗ್ರಹಿಸಿದನು
ಬುಕ್ಕಿನ ಪಾಠದ ಒಳನೋಟಕ್ಕೆ ಪ್ರಕೃತಿಯ ಒಸಗೆಯ ಬೆರಸಿದನು
ತನ್ನ ಕಣ್ಣುಗಳ ಹೊರನೋಟಕ್ಕೆ ಆತ್ಮದ ನೋಟವ ಬೆರಸಿದನು

ಅಮೆರಿಕ ರಷ್ಯ Cytogenetics ಕೆಲಸಗಳೆಲ್ಲವನೂ
ವಿಜ್ಞಾನಬ್ರಹ್ಮರು ಅಲ್ಲೆಸಗಿಹ ಕರ್ಮಗಳೆಲ್ಲವನೂ
ಮೌನದಿ ಮೆಚ್ಚುತ ಅರಿವನು ಬೆಳಸುತ ಸಾಧನೆಯಲ್ಲೇ ತೊಡಗಿದನು
ಪ್ರಕೃತಿಯ ಪಾಠದ ತನ್ನರಿವೆಲ್ಲವನದರ ಅನುಭವಕೆ ಕೂಡಿದನು.

ರಾಗ—ಮೋಹನ

ತನ್ನ ದೇಶದಾ ಹತ್ತುಕೋಟಿಗೆ ಹಸಿವು ತುಂಬಲೆಂತು ?
ತನ್ನ ದರಿದ್ರದ ನಾರಾಯಣರಿಗೆ ಪರಿಹಾರವದೆಂತು ?
ಬಡಕಲು ಸವೆದಿಹ ಒಡನಾಡಿಗಳಿಗೆ ಪುಷ್ಠಿಯ ವ್ಯೆಯೆಂತು ?
ಜ್ಞಾನದದೃಷ್ಟಿ, ಧರ್ಮದದೃಷ್ಟಿ ಚುಂಬಿಸಿತವನನ್ನು
Botany ದೃಷ್ಟಿ, ವಿಶಾಲದೃಷ್ಟಿ ತುಂಬಿತು ಅವನನ್ನು

ರಾಗ—ಕೇದಾರಗೌಳ

ಯಾವ ಬಳ್ಳಿಗಳು ಸಾಯುವ ಜನಕೆ ಸಂಜೀವನಿಯನ್ನೀಯುವುವು
ಯಾವುದು ಬೆಳೆಗಳು ಪ್ರಾಣಿಯ ಹೊಟ್ಟೆಯ ತೃಪ್ತಿಯವರೆಗೂ ತುಂಬುವುವು
ಯಾವುದು ಗಿಡಗಳು ನೋಯುವ ಜೀವಕೆ ಕಲ್ಪತರುವಿನಂತೆ ಸಿಗುವುವು
ಯಾವುದು ಚಿತ್ತಲೆಯನು ಮರೆಮಾಡುವ ಬಟ್ಟೆಯ ಸುತ್ತಲು ನೆರವಹುದು
ಯಾವುದು ಯಾವುದು ಜನದ ಜೀವನಕೆ ಹೊಸಹೊಸ ಆಸರೆಯಾಯುವುವು
ಯಾವುದು ಯಾವುದು ದುಡಿಮೆಯ ಬದುಕಿಗೆ ಅಮೃತರೂಪದಿಂ ಬರಲಿಹವು

ರಾಗ—ಮಾಂಡ್

ಕರ್ಮದ ತಪಸ್ಸು ಮಾಡಿದನು
ಕಾರ್ಯದಲ್ಲಿ ಕೈ ತೋರಿದನು
ಎರಡಡಿಯುದ್ದದ ಬೆಂಡೇಕಾಯಿ
ನಾಲ್ಕಡಿಯುದ್ದದ ಗೋರೀಕಾಯಿ
ಆರಡಿಯುದ್ದದ ಹಾಗಲಕಾಯಿ
ಹತ್ತಡಿಯುದ್ದದ ಸೌತೇಕಾಯಿ
ಹಂಡೆಯ ಗಾತ್ರದ ಕುಂಬಳಕಾಯಿ
ಮಂಡೆಯ ಗಾತ್ರದ ನೆಲ್ಲೀಕಾಯಿ

ಹತ್ತು ಹೊಟ್ಟೆಗಳ ತುಂಬುವ ಕೂಳು
ಹದ್ದಿನಗಾತ್ರದ ಅಕ್ಕೀಕಾಳು
ಹಂದಿಯ ಗಾತ್ರದ ಕೋಳೀಮೊಟ್ಟೆ
ಅಂಗಳದಗಲದ ಅಡಿಕೆಪಟ್ಟೆ
ಚೀನಾಂಬರದಂಥಾ ನಯಬಟ್ಟೆ
ಬೀದಿಗೆ ಹಾಸುವ ಗೋಣೀಪಟ್ಟೆ

ಹೊರಕ್ಕೆ ಬಂದವು ತಲೆಕಾಯಿಂದ
ಸಹಪಾಠೀಯ ತಲೆಕಾಯಿಂದ
ಮೆದುಳಿನ ಕಾರ್ಖಾನೆಯ ಹೊರಗಿಂದ
ವಿಜ್ಞಾನದ ತಪಸಿನ ಫಲದಿಂದ
**ಎರಡು ಪಾಠಗಳ ಹೊಂದಿಕೆಯಿಂದ.**

ಬಂಜರು ಭೂಮಿಯು ಹಸುರಾಯ್ತು
ಜೋಲು ಮುಖಗಳಿಗೆ ನಗುವಾಯ್ತು
ತೃಪ್ತಿ ಪುಷ್ಟಿಗಳ ಬೀಡಾಯ್ತು
ನಾಡುಸ್ವರ್ಗವಾಯ್ತು, ನಾಡುಸ್ವರ್ಗವಾಯ್ತು
ನಾಡುಸ್ವರ್ಗವಾಯ್ತು, ನಾಡುಸ್ವರ್ಗವಾಯ್ತು

ರಾಗ—ಮೋಹನ

ಸರಸತಿ ಪುತ್ರಿ ಮೀನಾಕ್ಷೀ ತಂದನ ತಾನಾನಾ
ಹರೆಳುಗಣ್ಣುಗಳ ಹರಿಣಾಕ್ಷೀ ,,
ಮನೆಯುಗೋಡೆಗಳ ಮಧ್ಯದಲಿ ,,
ಪುಸ್ತಕರಾಶಿಯ ಬದಿಗಳಲಿ ,,
ಕಾಲೇಜ್ botany libraryಲಿ ,,
ಬೀರು, shelfಉಗಳ ಸಂದಿನಲಿ ,,
ಪುಸ್ತ ಪುಸ್ತಕ ಓದಿದಳು ,,
ಎಲ್ಲವನ್ನು ಉರು ಹಾಕಿದಳು ,,
ನಮ್ಮಾ ಮೀನಾಕ್ಷೀ ರಮಣೀ ,,
ಆದಳೊಂದುರುವಿನ ಭರಣೀ ,,

ರಾಗ—ವಸಂತ

ಪುಸ್ತಕ ಪಿಶಾಚಿ ಮೀನಾಕ್ಷೀಗೆ ಬೇರೆಯಾವುದೂ ಬೇಡಾಯ್ತು
Practicalಲ್ಲು, realistic ಬೋಧನೆಯುವಳ ಕಿವಿಗೆ ಶತ್ರುಗಳಾಯ್ತು

Botany Journal, Botany Annals, Botany theory
ಬೇಕಾಯ್ತು
Recent Journals, ಬುಕ್ಸುಗಳೆಲ್ಲವು ತಲೆಯ ಬುರುಡೆಯನು ಹೊಕ್ಕಾಯ್ತು
Walking Cyclopedia ದಂತೆ Mastery ಪಡೆಯುವ ಹವಣಾಯ್ತು

ನಿದ್ದೆಯಲ್ಲಿ ಅವಳ
ಏನ ಕೇಳುವಿರಿ ನೀವ್
ಗ್ರಾಮಾಫೋನಿನ ರಿಕಾರ್ಡಿನಂತೆ
ತಟಪಟ ಬರುವುವು ಬಾಯಿಂದ—
ಪುಸ್ತಕವಚನಗಳು
ಕಣ್ಣುಮಿಟಕಿಸದೆಲುರುವನು ಹೊಡೆದ ಪುಸ್ತಕವಚನಗಳು

ರಾಗ—ಮಾಯಾಮಾಳವಗೌಳ

ಇತ್ತ ಕೇಳಿ ಬನ್ನೀ, ಜನರೇ
ಇತ್ತ ಕೇಳಿ ಬನ್ನೀ—ಮೀನಾಕ್ಷಿಯ ಸೌಗಂಧಾ
ಮೀನಾಕ್ಷಿಯ ಸೌಗಂಧಾ ||

ಹಬ್ಬಿತು ಹಬ್ಬಿತು ಪರಲೋಕಕ್ಕೆ
ಧರಣಿಯ ಒಳಲೋಕಕ್ಕೆ
ಗತಿಸಿದ ಜ್ಞಾನಿಯ ಕಿವಿಮುಟ್ಟಕ್ಕೆ—ಮೀನಾಕ್ಷಿಯ ಸೌಗಂಧಾ ||

ಎರಡು ಸಾವಿರದ ವರ್ಷದ ಹಿಂದೆ
ಗತಿಸಿದ ಜ್ಞಾನಿಯ ಕಿವಿಗಳಿಗೆ
ಗಾಳಿಯು ಹೊತ್ತಿತು ಒಂದೇ ಒಸಗೆ—ಮೀನಾಕ್ಷಿಯ ಸೌಗಂಧಾ ||

ಜ್ಞಾನಿಗಳೊಳು ಅತಿಶ್ರೇಷ್ಠ ಜ್ಞಾನಿ
ಸತ್ವವ ಹುಡುಕಿದ ಗತಸನ್ಮಾನಿ
Socrates ಮಹಾ ತತ್ವಜ್ಞಾನಿ
ಗಾಳಿಯ ಒಸಗೆಯ ಕೇಳಿದನು—ಮೀನಾಕ್ಷಿಯ ಸೌಗಂಧಾ ||

ಗಾಳಿಯ ಒಸಗೆಯ ಕೇಳಿದನು
ಮುಚ್ಚಿದ ಕಣ್ಣನು ಹೊರಳಿದನು
ಮಣ್ಣು ದೇಹಕೆ ಜೀವಕೊಟ್ಟಿತು—ಮೀನಾಕ್ಷಿಯ ಸೌಗಂಧಾ ||

ಅನೇಕ ಶತಮಾನಗಳಿಂದ
ಮಣ್ಣಲಿ ಅಡಗಿದ ಚಿತೆಯಿಂದ
Socrates ತಾ ಚಿಂತಿಸಿದ—ಮೀನಾಕ್ಷಿಯ ಸೌಗಂಧಾ ||

ಯಾರಿದು ಯಾರಿದು ಮೀನಾಕ್ಷೀ
ಲೋಕವೆ ಹೊಗಳುವ ಮೀನಾಕ್ಷೀ ಎಂದ ಸಾಕ್ರಟೀಸು
ಗಾಳಿಯು ಎನ್ನಯ ಕಿವಿಗೆಳಗೆ
ಹೊತ್ತಿತು ಮೀನಾಕ್ಷಿಯ ಒಸಗೆ ಎಂದ ಸಾಕ್ರಟೀಸು
ಮಹಾಜ್ಞಾನಿಯೇ ಮೀನಾಕ್ಷೀ
ಪಡೆದಳೆ ಸರಸ್ವತಿಯ ಶಕ್ತೀ ಎಂದ ಸಾಕ್ರಟೀಸು
ಗೋರಿಯ ಬಾಗಿಲ ಭೇದಿಸಿಕೊಂಡು
ಭೂಲೋಕಕೆ ನಾ ಹೋಗಿ ಬರುವೆನು ಎಂದ ಸಾಕ್ರಟೀಸು
ಮೀನಾಕ್ಷೀ ಮಣಿರಂಗು ಬುದ್ಧಿಗೆ
ಮಣಿಯುವೆ, ತಣಿಯುವೆ, ಹಿಂದಕೆ ಬರುವೆ ಎಂದ ಸಾಕ್ರಟೀಸು

ಲಾವಣಿ ಮಟ್ಟು

ಸಾಕ್ರಟೀಸು ತಾನೆದ್ದು ಬಂದನು ಗೋರಿಯ ಒಳಗಿಂದಾ
ಕಣ್ಣು ಉಜ್ಜಿ ಮೈಕೈಗಳ ಮುರಿದೂ ಭಂಗಿಯಲ್ಲಿ ನಿಂದಾ
Universityಗೆ ಮೊದಲು ಹೊರಟನು ಬಹಳ ಹೆಮ್ಮೆಯಿಂದಾ
ಮೀನಾಕ್ಷಿಯಾ answer bookಅನು ತೆಗೆದ ಠೀವಿಯಿಂದಾ
ಕಂಕುಳಲ್ಲಿ ಅದನ್ನು ಸಿಕ್ಕಿಸಿ ನಡೆದ ಬಿಗುವಿನಿಂದಾ
ಅದರ ಜತೆಯಲ್ಲಿ ತಕ್ಕಡಿಯೊಂದನು ತೆಗೆದುಕೊಂಡು ಬಂದಾ
ಹೊರಟನು ಮೀನಾಕ್ಷಿಯ ನೋಡಲ್ಕೆ ತುಂಬು ಹರುಷದಿಂದಾ
ನೋಡಿದನಲ್ಲಿ ಮೀನಾಕ್ಷೀಯಾ ತಲೆಯ ಬುರುಡೆಯನ್ನೂ
ಅವಳೊಡನೋದಿದ ಸಹಪಾಠೀಯಾ ತಲೆಯ ಬುರುಡೆಯನ್ನೂ

ರಾಗ—ಮಾಂಡ್

ತೆಗೆದನು ಬುರುಡೆಯ ಮುಚ್ಚಳವಾ
ಸಹಪಾಠೀಯಾ ಮುಚ್ಚಳವಾ
ಕೈಯನದರೊಳಗೆ ದೂರಿದನೂ
ಏನಿದು ಏನಿದು ಅಚ್ಚರಿಯೂ !—
ಎರಡಡಿಯುದ್ದದ ಬೆಂಡೇಕಾಯಿ

ನಾಲ್ಕಡಿಯುದ್ದದ ಗೋರೀಕಾಯಿ
ಮಂಡಿಯುಗಾತ್ರದ ನೆಲ್ಲೀಕಾಯಿ
ಹದ್ದಿನಗಾತ್ರದ ಆಕ್ಕೀಕಾಳು—
ಏನಿದು ಏನಿದು ಅಚ್ಚರಿಯೂ !

ಸಾಕ್ರಟೀಸನಾ ಮುಖಾರವಿಂದ ತಾವರೆಯಂತೆ ವಿಕಸಿಸಿತು
ಕಣ್ಣುಗಳೆರಡೂ ಮಲ್ಲಿಗೆಯಂತೆ ಅಮಿತಾನಂದದಿ ವಿಕಸಿಸಿತು.



ರಾಗ—ವರಾಳಿ

ಮೀನಾಕ್ಷಿಯು ತಲೆಬುರುಡೆಯ ಬಳಿಗೆ ಸಾಕ್ರಟೀಸು ಬಂದಾ
ಎಚ್ಚರದಿಂದ ಬುರುಡೆಯು ಮುಚ್ಚಳ ಸದ್ದಿಲ್ಲದೆ ತೆಗೆದಾ

ಒಳಗಡೆ ಇಸುಕಿ ಕೈಯು ದೂರಿಸಿದ ಬಹಳ ಝೋಕಿನಿಂದಾ
ಅರಳಿದ ಮುಖವದು ಜೋಲು ಬಿದ್ದಿತು ಅತಿ ನಿರಾಶೆಯಿಂದಾ
ಅತಿ ನಿರಾಶೆಯಿಂದಾ.

ರಾಗ—ಕೇದಾರ ಗೌಳ

ಹೊರಕ್ಕೆ ಸೆಳೆದನು ಪ್ರಯಾಸದಿಂದಾ Coulter botany ಯಾ
Chamberlainನ Gymnospermsiನ ಎಲ್ಲ Volume ಉಗಳಾ
Coulter ಬರೆದಿಹ Angiospermsiನ ಪುಸ್ತಕವೆಲ್ಲವನೂ
Strasburgeriನ botany bookಊ Physiologyಗಳನೂ
Darlington ನ್ನಿನ Advancesಊ Cytologyಯಲ್ಲೀ
ಇನ್ನೂ ಏನೇನೇನೋ ಬುಕ್ಕುಗಳೆಲ್ಲವು ಇದ್ದವು ಬುರುಡೆಯಲಿ

ಹೊರಕ್ಕೆ ಬಂದವು ಒಂದೊಂದಾಗೀ
ಮೀನಾಕ್ಷೀಯಾ ಮೆದುಳಾಗೀ

ಇನ್ನೂ ತೆಗೆದನು ತಲೆಯೊಳಗಿಂದ ಕಂತೆಕಂತೆ Volumeಉಗಳಾ
Botany Gazetteಉ, Botany Review,
American Journal of Botany
ಹೊರಕ್ಕೆ ಬಂದವು ಒಂದೊಂದಾಗೀ
ಮೀನಾಕ್ಷೀಯಾ ಮೆದುಳಾಗೀ

ಲಾವಣಿ ಮಟ್ಟು

ಸಾಕ್ರಟೀಸನಿಗೆ ಧೈರ್ಯ ಕುಗ್ಗಿತು, ತೆಗೆದನು ಕಂಕುಳಸಂದಿಂದ
ಮೀನಾಕ್ಷೀಯಾ Answer Bookನು ತುಂಬಿದ ಬರಹದ ಹಾಳೆಗಳ
ಒಂದು ಕೈಯಿನಲಿ ಹಾಳೆಯ ಹಿಡಿದನು ಸಾವಧಾನದಿಂದಾ
ಇನ್ನೊಂದ್ಕೈಯುಲಿ ತಾಳೆ ನೋಡಿದನು Text Bookಉ ಗಳಿಂದಾ

ರಾಗ—ಮಾಂಡ್.

ಏನಿದು ಏನಿದು ಮೀನಾಕ್ಷೀ — ತಂದನಾ ತಾನಾನಾ
ಲೋಕವೆ ಹೊಗಳುವ, ಮೀನಾಕ್ಷೀ — ,,

ಪಂಕ್ತಿಗೆ ಪಂಕ್ತಿ, ಪಾದಕ್ಕೆ ಪಾದ — ತಂದನಾ ತಾನಾನಾ
ಮಾತಿಗೆ ಮಾತು, ಉರುಹೊಡೆದಿರುವೆ — ,,
ಚಿತ್ರಕೆ ಚಿತ್ರ, ಅಂಕಿಗೆ ಅಂಕಿ, — ,,
Graphಇಗೆ graphಉ ಉರುಹೊಡೆದಿರುವೆ—ತಂದನಾ ತಾನಾನಾ

ಬುಕ್ಕು ಪತಿವ್ರತೆ ಮಿಾನಾಕ್ಷೀ
ಬರಿಯ ಉರು ಹೊಡೆದೆ ಮಿಾನಾಕ್ಷೀ
ಉರುವನೆ ಇಳಿಸಿಹೆ ಮಿಾನಾಕ್ಷೀ !
ಎದೆ ಎದೆ ಹೊಡೆವೆನು ಮಿಾನಾಕ್ಷೀ !
ತಲೆತಲೆ ಬಡಿವೆನು ಮಿಾನಾಕ್ಷೀ !

ಲಾವಣಿ ಮಟ್ಟು

ಸಾಕ್ರಟೀಸು ತಾ ಕಿಸೆಯುಲಿ ಸೆಕ್ಕಿದ ತಕ್ಕಡಿಯನು ಹೊರಸೆಳೆಯುವನ್ನು
ಒಂದು ತಟ್ಟೆಯಲಿ ಮಿಾನಾಕ್ಷಿಯು ತಲೆ, ಸಹಪಾಠಿಯದಿನ್ನೊಂದರಲಿ
ತಕ್ಕಡಿಯನ್ನು ಮೇಲಕ್ಕೆತ್ತಲು ಏನನ ಕಾಣುವಿರಿ ?
ಮೇಲಕ್ಕೆದ್ದಿತು ಮಿಾನಾಕ್ಷಿಯಾ ಟೊಳ್ಳು ತಲೆಯ ಬುರುಡೆ
ಕೆಳಕ್ಕೆ ಜೋಲ್ದಿತು ಸಹಪಾಠೀಯ ಗಟ್ಟಿತಲೆಯ ಬುರುಡೆ.

—ಸೋಮಿ.

———

ಸ್ಥಳದ ಏಕೀಕರಣದ ಮಹಾಸಭೆಯಲ್ಲಿ "ಕನ್ನಡ ನಾಡಿನ ಏಕೀಕರಣ ಕ್ಷಿಪ್ರದಲ್ಲೇ ಜಯಪ್ರದವಾಗಿ ನಡೆಯುವಂತೆ ಕರ್ನಾಟಕದ ಅಧಿದೇವತೆಯಾದ ಭುವನೇಶ್ವರಿಯನು ಪ್ರಾರ್ಥಿಸಲು ಕನ್ನಡನಾಡಿನಲ್ಲೆಲ್ಲ ಒಂದು ದಿನವನ್ನು ಗೊತ್ತುಮಾಡಬೇಕೆಂ"ಬ ನಿರ್ಣಯ ಬಂದಾಗ ಅಧ್ಯಕ್ಷರು, "ಅದರ ಅವಶ್ಯಕತೆ ಅಷ್ಟಾಗಿ ಕಂಡು ಬಂದಿಲ್ಲ" ಎಂದು ಹೇಳಿ ನಿರ್ಣಯವನ್ನು ತಳ್ಳಿ ಹಾಕಿದರು.

* * * *



ಕಸ್ತೂರೀ........ ... ಕೇಸರೀ........ಇಂಗು ! " " ಕಸ್ತೂರೀ........ ಕೇಸರೀ ... ಇಂಗು ! ".... ಎಂದು ಕೂಗುತ್ತ ಬಂದ, ಉತ್ತರದೇಶದ ರಂಗುರಂಗಿನ ವ್ಯಾಪಾರಿ, ಶಿವಮೊಗ್ಗದ ದುರ್ಗೀಗುಡಿಗೆ !........ನನ್ನ ಮನೆ ಬಾಗಿಲಿಗೆ !

ನಾನು ಯಾವುದನ್ನೂ ಕೊಂಡುಕೊಳ್ಳಲಿಲ್ಲ. ಆದರೂ, ಆ ಕೂಗು ನನ್ನ ತಲೆಯನ್ನು ಹೊಕ್ಕು ಮೆದುಳನ್ನು ಕದಡಿಸಿತು. ಮೆದುಳಿನ ಮೇಲಿನ ಹಳ್ಳದಿಣ್ಣೆಗಳಲ್ಲಿಯು ನರದ ಕೊನರುಗಳು ಅಲುಗಾಡಿದುವು. ವಿಚಾರ ತರಂಗಗಳೆದ್ದುವು

ಆ ಮೂರು ಪದಾರ್ಥಗಳನ್ನೂ ಒಬ್ಬನೇ ಒಂದೇ ಚೀಲದಲ್ಲ ತುಂಬಿ ಮಾರಲು ಸಾಧ್ಯವೆ ? ಕಸ್ತೂರಿಯನ್ನು ಇಂಗಿನಷ್ಟೇ ಧಾರಾಳವಾಗಿ ಇವನ ಹತ್ತಿರ ಯಾರು ತೆಗೆದುಕೊಳ್ಳುತ್ತಿದಾರೆ ? ಉತ್ತರದೇಶದಲ್ಲಿ ಮಾತ್ರ ಇವು ಮೂರೂ ತಯಾರಾಗುತ್ತಿರುವುದಕ್ಕೆ ಕಾರಣವೇನು ? ಅವು ಮೂರೂ ನಮಗೆ ಇನ್ನುಮೇಲೆ ಪಾಕಿಸ್ತಾನದಿಂದಲೇ ಬರಬೇಕೇನು ? ಇಂಡ್ಯಾದಲ್ಲಿ ಇಂಗೇ ಸಿಗದೆ ಇದ್ದರೆ ಗತಿ ಏನು ? ಕಸ್ತೂರಿ ಸಿಗದೆ ಹೋದರೂ, ನಮ್ಮೂರು ಪಂಡಿತರುಗಳು ಕಸ್ತೂರಿ ಮಾತ್ರೆಗಳನ್ನು ಮಾಡಿ ಮಾರಬಲ್ಲರು, ಕೇಸರಿಗೆ ಬದಲು ಕೇಸರಿ ಪೌಡರಿದೆ; ಶ್ರೀಮಂತರ ಮನೆಗಳಲ್ಲೂ ಅಡಿಗೆಯವರು ಅದನ್ನೇ ಉಪಯೋಗಿಸುತ್ತಿದಾರೆ ಅದೂ ಅಲ್ಲದೆ,

ರವೆಯೂ ಸಕ್ಕರೆಯೂ ತುಪ್ಪವೂ ಸಿಗದ ಕಾಲದಲ್ಲಿ ಬರೀ ಕೇಸರಿ ಒಂದರ ಅಭಾವ ದಿಂದ ಅನಾಹುತವೇನೂ ಆಗಲಾರದು. ವನಸ್ಪತಿ ಜಿಲೇಬಿಗೆ ಕೇಸರಿಬಣ್ಣದ ಧೂಳನ್ನೇ ಎಂಥ ಬೃಹಸ್ಪತಿ ಕೂಡ ಹಾಕುವುದು.

ಆದರೆ, ಇಂಗು ! ಇಂಗೊಂದಿಲ್ಲದಿದ್ದರೆ, ಮದರಾಸಿಗಳ ಮೆದುಳಿನ ಚುರುಕೇ ಇಂಗಿಹೋಗುವುದಲ್ಲಾ ! ಅಲ್ಲಿ, ಸಂಗೀತ ಕಚೇರಿಗಳು ನಡೆಯುವ ಸಭಾಮಂದಿರ ದಲ್ಲೂ ಇಂಗಿನ ಜಾಹಿರಾತುಗಳು ಸಭಿಕರ ಮೂಗನ್ನು ಸೆಳೆಯುತ್ತವಂತೆ. ಬಸ್ಸು ಟ್ರಾಮು ಲಾಂದ್ರದಕಂಬ ಚೌಕಚೌಕದ ಶಿಲಾವಿಗ್ರಹ ಗವರ್ನ್‌ಮೆಂಟ್ ಹೌಸ್ ಗೋಡೆ ಎಲ್ಲೆಡೆಯಲ್ಲೂ ಇಂಗನ್ನೇ ಬಳಿದಿರುತ್ತಾರಂತೆ, ರಾಮಭಟ್ಟರು ಹೇಳಿದ್ದರು. ಗಂಗಾಮೃತಕ್ಕೆ ಇಂಗು ಬೆರೆಸಿದರೆ, ತಿಳಿ ಸಾರಾಯಿತು, ಅಂತಾರಂತೆ, ಅತ್ತಕಡೆ ನಳರು, ಅತ್ತಕಡೆ ದಮಯಂತಿಯರಿಗೆ. ಬೇಳೆ ಸಿಗದ ಈ ಯುದ್ಧಾನಂತರದ ಸುವರ್ಣಯುಗದಲ್ಲಿ, ಇಂಗೇ ಶರಣು, ಅಂತ ತೋರುತ್ತೆ, ನಮಗೂನೂ !

ಬಿಳಿ ಇಂಗು ಪರಂಗಿಯವರಿಗಾದರೆ, ನಮಗೆ ಕರಿ ಇಂಗು ! ಇಂಗು, ಜೀರ್ಣ ಕಾರಿ ; ವಮನಕಾರಿ ; ದುರ್ನಾತಕಾರಿ. ಆದರೂ, ಅದನ್ನ ನಾವು ತಿಂದು ತೇಗುತ್ತಿದೇವೆ. ಬಾಯ ಹತ್ತಿರವೇ ದೇವರು ಮೂಗನ್ನಿಟ್ಟಿದ್ದರೂ, ಮನುಷ್ಯ ಎಂಥೆಂಥ ಅಸಹ್ಯಗಳನ್ನು ತಿಂದು ಬದುಕುತ್ತಿದಾನೆ !

ಇಂಗು ತಿಂಬುವ ಅಭ್ಯಾಸ ಮನುಷ್ಯನಿಗೊಬ್ಬನಿಗೇ ಅಲ್ಲ. ಅದನ್ನು ನಾವು ನಮ್ಮ ಪೂರ್ವೀಕರಿಂದ ಕಲಿತಿದೇವೆ. ಇಂಗು ತಿಂದ ಕಪಿ ಇವತ್ತಿಗೂ ನಮೋನ್ಮಾದ ದಿಂದ ಕುಣಿದಾಡುತ್ತದೆ. ಅದಕ್ಕೋಸ್ಕರವೇ ಅದೊಂದು ಗಾದೆಯಾಗಿ ನಾಡ ನಾಲಗೆ ಮೇಲೆ ನೆಲೆಗೊಂಡಿದೆ .......ಇಂಗು ತಿಂದ ಕಪಿ ಹುಚ್ಚುಹಿಡಿದಂತೆ ಹಾರಾಡು ತ್ತದೆಯಂತೆ.

ನನ್ನ ವಿಚಾರತರಂಗ ಈ ಘಟ್ಟಕ್ಕೆ ಬರುತ್ತಲೂ, ನನ್ನ ಮೆದುಳೊಳಗೆ ಒಂದು ಪ್ರಶ್ನಾರ್ಥಕಚಿಹ್ನೆ ಹುಟ್ಟಿಕೊಂಡಿತು, "ಇದು ನಿಜವೆ ?" "ಕಪಿಯೊಂದಕ್ಕೆ ಇಂಗು ತಿನ್ನಿಸಿ, ಯಾವ ಸಂಶೋಧಕನಾದರೂ ಈ ವಿಷಯವನ್ನು ವೈಜ್ಞಾನಿಕ ಪ್ರಯೋಗದಿಂದ ದೃಢೀಕರಿಸಿದಾನೆಯೇ ?" ಎಂದು ನಾನು ಕೇಳಿದೆ. ಆದರೆ, ಆ ದುರ್ಗೀಗುಡಿ ಮನೆಯಲ್ಲಿ ಉತ್ತರ ಕೊಡಲು ಯಾರೂ ಇರಲಿಲ್ಲ.

ಕಿಟಕಿಯಿಂದ ಹೊರಕ್ಕೆ ನೋಡಿದೆ. ಸಂಶೋಧನೆಗೆ ಬೇಕಾದ ಪಶು ಅಲ್ಲೇ ಒಂದು ಮರದ ಮೇಲೆ ಕೂತಿತ್ತು. ಸರಕ್ಕನೆ ಅಡಿಗೆ ಮನೆಗೆ ಹೋಗಿ, ಕಾಲು ತೊಲದಷ್ಟು ಇಂಗನ್ನು ಉಂಡೆಮಾಡಿ ಒಂದು ಬಾಳೆ ಹಣ್ಣಿನೊಳಕ್ಕೆ ಸೇರಿಸಿ ಮುಂದಿನ ಹಜಾರದಲ್ಲಿರಿಸಿದೆ

ಕಪಿಯು ಕಣ್ಣರಳಿತು ; ಅದು ಕೆಳಕ್ಕಿಳಿಯಿತು ; ಮತ್ತೆ ಮರದ ಕೊಂಬೆಯ ಮೇಲೆ ಕೂತುಕೊಂಡಿತು. ಇಂಗು ಸಹಿತವಾಗಿ, ಕದಳೀಫಲವನ್ನು ಒಳಕ್ಕೆ ರವಾನಿಸಿತು. ಬಂದ ಉನ್ಮಾದದಲ್ಲಿ ಆ ಮರವನ್ನೇ ಬುಡಸಹಿತ ಕಿತ್ತು ಬಂಡೆಗಳನ್ನುರುಳಿಸಿ ತುಂಗಾನದಿಗೆ ಹೊಸದೊಂದು ಸೇತುವೆ ಕಟ್ಟಿಬಿಡುತ್ತದೆ; ಭದ್ರಾವತಿಗೆ, ಹಾರಿ ಕಾರ್ಖಾನೆ ಚಿಮ್ಮಿಣಿಯನ್ನೇ ಭದ್ರಾನದಿಗೆ ಅಡ್ಡವಾಗಿಟ್ಟು ಬಿಡುತ್ತದೆ, ಅಂತ ಇದ್ದೆ.

ಇಂಗು ತಿಂದ ಕಪಿ ಹೇಳಲಾಗದ ಸಂಕಟವನ್ನನುಭವಿಸುತ್ತ ಸಹತಪಿಸಲು ಸಮೀಪದಲ್ಲಿ ಯಾರೂ ಇಲ್ಲದಿರುವುದರಿಂದ ಮತ್ತಷ್ಟು ಕೊರಗುತ್ತ, ತಲೆಯಮೇಲೆ ಕೈಇಟ್ಟು ಬಾಯಿತೆರೆದು ನಾಲಗೆನೀಡಿ, ಗೋಳಾಡುತ್ತಿತ್ತು.

ಇಂಗು ತಿಂದ ಕಪಿಯಷ್ಟು ಕಷ್ಟಜೀವಿ ಬೇರೊಂದಿಲ್ಲವೆಂದು ನಾನು ಈಗ ವೈಜ್ಞಾನಿಕವಾಗಿಯೇ ಹೇಳಬಲ್ಲೆ.

—ರೇವಣ್ಣ.

---



ಶಾಲೆ ರಸ್ತೇಲಿರೋ ಮನೇಲಿ ಸೀಬೇಕಾಯಿ ಗಿಡ ಇರಲೇಬಾರದು ನೋಡಿ.

# ದುಪಟಿ ದುರಂತ

—o—

ರಾಮು ಬೆಂಗಳೂರಿಗೆ ಅವರಕಡೆ ಯಾವುದೋ ಮದುವೆಗಾಗಿ ಬಂದು ನಮ್ಮ ಮನೆಯಲ್ಲೂ ನಾಲ್ಕು ದಿನವಿದ್ದು ಹೋದ. ಹೋದೊಡನೆ ಬಿರುಗಾಳಿಯಂತೆ ಒಂದು ಕಾಗದ ಬಂತು :

ಅಯ್ಯಾ !

ನಾನು ಬೆಂಗಳೂರಿನಲ್ಲೇ ನನ್ನ ರಗ್ಗ್ಗು ಮರೆತು ಬಂದಿದ್ದೇನೆ. ಮೈಸೂರಿನಲ್ಲಿ ನಾನು ಈದಿನ ರೈಲಿಳಿದಾಗ ಏನೋ ಭಾರ ಕಡಿಮೆಯಾದ ಹಾಗೆ ತೋರಿತು. ಏನೊಂತ ನೋಡುವಾಗ 'ರಗ್ಗಿ'ಲ್ಲ ! ಅದು ರೈಲಿನಲ್ಲಿ ಕಳೆದುಹೋಗಿರುವುದಕ್ಕೆ ಕಾರಣವಿಲ್ಲ. ನಿಮ್ಮ ಮನೆಯಲ್ಲೇ ಬಿಟ್ಟಿರಬೇಕು. ದಯವಿಟ್ಟು ತೆಗೆದಿರಿಸು. ಭಾನುವಾರ ಅದಕ್ಕಾಗಿ ಬಂದು ತೆಗೆದುಕೊಂಡು ಹೋಗುತ್ತೇನೆ. ಅದಿಲ್ಲದೆ ಇರುವುದರಿಂದ ಹೇಗ್ಹೇಗೋ ಆಗಿದೆ. ಇಂಗ್ಲೀಷಿನಲ್ಲಿ ಹೇಳುವುದಾದರೆ I am not myself. ಬಾಕೀ ವಿಷಯ ಮೊಖ್ತಾ.

ಇತಿ–ರಾಮು

ನಾನು ಉತ್ತರ ಬರೆಯಬೇಕಾಯಿತು—ಬರೆದೆ.

ಅಯ್ಯಾ ಮನುಷ್ಯ !

ನಿನ್ನ ರಗ್ಗು ಇಲ್ಲೇ ನಿಂತು ಹೋಗಿದೆಯೆಂದು ಬರೆದಿದ್ದೀಯೆ. ರಗ್ಗು ಎಂದರೆ ಕನ್ನಡದಲ್ಲಿ ದುಪಟಿ ತಾನೆ ? ನಿನ್ನ ಪೇಚಾಟದಲ್ಲಿ ನನಗೆ ಪೂರ್ಣ ಸಹಾನುಭೂತಿಯಿದೆಯಾದರೂ 'ಆ ನಿನ್ನ ದುಪಟಿ' ಇಲ್ಲಿಲ್ಲ. ಇದ್ದರೆ ತಕ್ಷಣ ಪತ್ತೆಯಾಗುತ್ತಿತ್ತು. ಮೊನ್ನೆ ಇಲ್ಲಿ ನಿನ್ನ ತಂಗಿಯ ಓರಗಿತ್ತಿಯ ಮದುವೆಯಲ್ಲಿ ಬೀಗರಿಗೂ ನಿಷುಗೂ, ಬಂದವರು ಕೂರಲು ಹಾಸಿದ್ದ ಒಂದು ಭಾರೀ ಗುಡಾರದ ವಿಷಯದಲ್ಲಿ ಕೊಂಚ ರಾದ್ಧಾಂತ ನಡೆದು ಬೀಗರಾತನೊಬ್ಬ ಪನ್ನೀರುದಾನಿ ತೆಗೆದು ಅದರಮೇಲೆ ಚೆಲ್ಲಿದನಲ್ಲ ! ಅದು ತಾನೆ ನಿನ್ನ ರಗ್ಗು ? ಹಾಗಾದರೆ ಇಲ್ಲಿಲ್ಲ. ನೀನು ಹೊರಟ ಮೇಲೆ ನಮ್ಮ ಮನೆಯಲ್ಲಿ ಹತ್ತಾರು ತಗಣೆ ಸಂಸಾರಗಳು ಅಲ್ಲಲ್ಲಿ ಕಾಣಿಸಿಕೊಂಡು ಸಾಕಷ್ಟು ಹಾವಳಿ ಎಬ್ಬಿಸಿವೆಯಾದ್ದರಿಂದ ಯಾವುದಾದರೂ ಮೂಲೆಯಲ್ಲಿ ನಿನ್ನ 'ರಗ್ಗು' ಅಡಗಿರಬಹುದೋ ಎಂಬ ಗುಮಾನಿಯಿಂದ ಮನೆಯ ಮೂಲೆಮೂಲೆಯೆಲ್ಲಾ ತಲಾಷ್ ಮಾಡಿದೆ, ಇಲ್ಲ. ಇದ್ದರೆ ಅದರದೇ ಆದ, (ಕ್ಷಮಿಸು, ನಿನ್ನದೇ ಆದ)

ಒಂದು ಅಪೂರ್ವ ಗಂಧದಿಂದ ಅದನ್ನು ಪತ್ತೆ ಹಚ್ಚಬಹುದಾಗಿತ್ತು. ದಯವಿಟ್ಟು ಇನ್ನೊಂದು ಸಾರಿ ಜ್ಞಾಪಿಸಿಕೋ ಎಲ್ಲಿ ಬಿಟ್ಟೆಯೋ, ಇನ್ನೇನೂ ವಿಶೇಷವಿಲ್ಲ.

ಇಂತು— — — —

ಅವನು ಬಿಡಲಿಲ್ಲ.

ಅಯ್ಯಾ ಪ್ರಾಣಿ !

ಅದು ಇಲ್ಲಿಲ್ಲ. ನಾನು ತರಲೇ ಇಲ್ಲ. ನಿಮ್ಮಲ್ಲೇ ಮರೆತು ಬಂದೆ. ಹುಡುಗರ‍್ಯಾರಾದರೂ ಆಟವಾಡುವುದಕ್ಕೆ ಎತ್ತಿಟ್ಟಿರಬಹುದು. ನೋಡಿ ತಿಳಿಸು. ಖಂಡಿತಾ ನೀನು 'ಸಿಕ್ಕಿತು' ಅಂತ ಬರೆಯುವ ತನಕ, ನನ್ನ ಮನಸ್ಸಿಗೆ ಶಾಂತಿ ಇಲ್ಲ. ನನ್ನ ಸರ್ವಸ್ವವೇ ಇಲ್ಲದಂತಾಗಿ ಮಂಕು ಕವಿತಿದೆ. ಬಾಕಿ ಏನೂ ಇಲ್ಲ.

ಇತಿ — ರಾಮು.

P. S ನಿಮ್ಮ ಮನೆಯುಲ್ಲಿಲ್ಲದಿದ್ದರೆ, ನಿಮ್ಮಜ್ಜಿ ಮನೆಯುಲ್ಲಿ ಒಂದು ದಿನ ಮಲಗಿದ್ದೆನಲ್ಲ! ಅಲ್ಲಿರಬಹುದು. ದಯವಿಟ್ಟು ಕೇಳು. ಅಂತೂ ಬೆಂಗಳೂರಲ್ಲೇ ಇದೆ ಅದು.

ಅಯ್ಯೋ ಪೀಕಲಾಟವೇ ಅಂತ ಮರುಗೀಚಿದೆ.

ಅಯ್ಯಾ ಮಹಾಪ್ರಾಣಿ !

ನಿನ್ನ ಕಾಗದ ತಲ್ಪಿತು. ಅಭಿಪ್ರಾಯವಾಗಲಿಲ್ಲ. ನಿನ್ನ ಹಿಂದಿನ ಕಾಗದ ಬಂದೊಡನೆ ಮನೆಯೆಲ್ಲಾ ತಲಾಷ್ ಮಾಡಿದೆ. ನಿನ್ನ ರಗ್ಗು ಅದರಾಣೆ ಇಲ್ಲಿಲ್ಲ. ಮೊನ್ನೆ ನಮ್ಮ ಮನೆಯುಲ್ಲಿ ಚಿಕ್ಕದೊಂದು ಕಳ್ಳತನವಾಯಿತು. ನಿನ್ನ ದುಃಖದಲ್ಲಿ ಇದೇನು ಅಂತ ಬರೆಯಲಿಲ್ಲ. ಆ ಕಳ್ಳತನದಲ್ಲಿ ನಿನ್ನ ದುಪಟಿ ಮಾಯವಾಗಿರಬಹುದೆಂದು ನೀನು ಊಹಿಸಬಹುದು. ಅದು ಅಸಾಧ್ಯ. ಯಾವ ಖದೀಮ ಕಳ್ಳನಿಗೂ ನಿನ್ನ ದುಪಟಿಮೇಲೆ ಕೈಮಾಡಲು ಎದೆ ಬಾರದು.

ನಮ್ಮ ಹುಡುಗರು ಆಟಕ್ಕೆ ತೆಗೆದುಕೊಂಡಿರಬಹುದೆಂದು ಬರೆದಿದ್ದೀಯೆ. ಶುದ್ಧ ತಪ್ಪು ಭಾವನೆ. ನಮ್ಮ ಮನೆ ಹುಡುಗರು ಕಂಬಳಿ ಮನೆ ಕಟ್ಟಿ ಆಡುತ್ತಿರುವುದುಂಟು. ಆದರೆ ನಿನ್ನ ರಗ್ಗನ್ನು ಮೂಸಿನೋಡುವ ಸಾಹಸಕ್ಕೆ ಕೂಡ ಅವರು ಹೋಗಿಲ್ಲವೆಂಬ ಭರವಸೆ ನನಗಿದೆ. ಸಮಾಧಾನ ತಂದುಕೊ. ಇನ್ನೊಂದು ಸಾರಿ ತಲೆಕಚ್ಚಿ ಯೋಚಿಸು—ಸಿಕ್ಕುತ್ತೆ.

ನಮ್ಮಜ್ಜಿ ಮನೆಯಲ್ಲಿರಬಹುದೆಂದು ಬೇರೆ ಬರೆದಿರುವೆ. ನಮ್ಮಜ್ಜಿಮನೆಗೆ ಮೊನ್ನೆ ಬೆಂಕಿ ಬಿದ್ದು ಮನೆಯಲ್ಲಿದ್ದಬದ್ದದ್ದೆಲ್ಲಾ (ಮನುಷ್ಯರನ್ನು ಬಿಟ್ಟು) ಭಸ್ಮ ವಾಯಿತು. ಆದ್ದರಿಂದ ನಿನ್ನ 'ರಗ್ಗು' ಅಲ್ಲಿಲ್ಲ. ಇದ್ದಿದ್ದರೆ ಅದು ಎಂತಹ ಬಡ ಬಾಗ್ನಿಗೂ ಬೇಯುವ ಚಿನ್ನೆಯ್ಹಕೂಡ ತೋರಿಸುತ್ತಿರಲಿಲ್ಲವೆಂಬುದು ನಿನಗೆ ಗೊತ್ತೇ ಇದೆಯಲ್ಲ!

ಅಲ್ಲದೆ ಆಕಸ್ಮಾತ್ ಬೇಹುಷಾರಿಯಿಂದ ರೈಲಿನಲ್ಲಿ ಕಳೆದುಹೋಗಿದ್ದರೆ, ಖಂಡಿತಾ ಇಷ್ಟರಲ್ಲೇ ನಿನ್ನ ಅಡ್ರೆಸ್ಸಿಗೆ ಅದರ ಪಾರ್ಸಲ್ ಬರುತ್ತೆ. ಅದು ಕಾಶೀ ವರೆಗೆ ಪ್ರಯಾಣಮಾಡಿದ್ದರೂ ವಾಪಸ್, M S R. ಗೇ ಬರುತ್ತೆ. ಬರೀ ವಾಸನೆಯಿಂದ ಕಳೆದು ಹೋದ ಮಾಲುಗಳ ಮಾಲೀಕರನ್ನು ಪತ್ತೆ ಹಚ್ಚುವ ಎಕ್ಸ್‌ಪರ್ಟ್‌ಗಳಿದ್ದಾರಲ್ಲ ರೈಲ್ವೆ ಡಿಪಾರ್ಟ್‌ಮೆಂಟುಗಳಲ್ಲಿ! ತಾಳಿದವನು ಬಾಳಿ ಯಾನು!

ಇತಿ———

ನಂತರ ಎರಡುವಾರ ಅವನ ಉಸಿರಿಲ್ಲ. ಆಮೇಲೆ ಒಂದು ಮಂಗಳವಾರ ಮಟ ಮಟ ಮಧ್ಯಾನ್ಹ ಅರಿಸಿನ ಪೂರಿತ ಲಕ್ಕೋಟೆಯೊಂದು ಬಾಗಿಲ ಸಂದಿನಲ್ಲಿ ಬಿತ್ತು.

ನನ್ನ ಅಚ್ಚುಮೆಚ್ಚಿನ ಬಚ್ಚಾ!

ಮೆಚ್ಚಿದೆ ನಿನ್ನಯ ಹೆಚ್ಚಿನ ಅನುಭವದ ಮಾತಿಗೆ. ಬಚ್ಚಲಿಗಿಳಿದಾಗ ಸ್ವಚ್ಛಮನಸ್ಸಿನಿಂದ ಯೋಚಿಸಿದೆ. ಮನಬಿಚ್ಚಿ, ತುಟಿಕಚ್ಚಿ ತಲೆಕೆರೆದೆ. ಅರೆ ಹುಚ್ಚಾ! ನಿನ್ನನೆಚ್ಚಿನ ಹಚ್ಚಡ ಇಲ್ಲೇ ಎಲ್ಲಾದರೂ ಬಚ್ಚಿಟ್ಟಂತೆ ಮರೆಯಾಗಿರ ಬಹುದೆ? ಹಲ್ಲಿ ಲೊಚ್ಚಲೊಚ್ಚೆಂದಿತು. ನನ್ನ ಹೊಟ್ಟೆಯಲ್ಲಿದ್ದ ಕಿಚ್ಚು ನಂದಿತು. ಬೆಚ್ಚಗೆರೆಡು ಚೊಂಬು ತಲೆಗೆ ಹಾಕಿ ಕಣ್ಣೊರಸಿಕೊಳ್ಳುವಾಗ ಹಿತ್ತಲಿನ ಹಚ್ಚ ಹಸುರಿನ ಮಧ್ಯೆ ಮಳೆಯೊಂದು ಬೆಚ್ಚಗೆ ಹೊಚ್ಚಿದ್ದಾಳೆ ನಮ್ಮಾಕೆ ಸೌದೆ ರಾಶಿಯ ಮೇಲೆ ನನ್ನ water proof ಹಚ್ಚಡವ. ಏನುಕೆಚ್ಚಿದೆ! ಹೆಚ್ಚೇಕಿ ತುಸುರೇಗಿ 'ವಿಚ್ಚೀ' (ನಮ್ಮಾಕೆ 'ವಿಶಾಲಾಕ್ಷಿ—) ಅಂದೆ

"ನಿಮ್ಮ ದಯವೇನು, ನಿಮ್ಮ ದುಪಟಿ ದಯದಿಂದ ಸೌದೆ ಅಂಥಾ ಮಳೆ ಯಲ್ಲೂ ಒಣಗಿ ಸದ್ಯ ಕಣ್ಣುರಿ ತಪ್ಪಿತು ನಾಲ್ಕು ದಿನ" ಅಂತ ರಗ್ಗು ತೆಗೆದು ಸೌದೆ ಒಳಕ್ಕೆ ಸಾಗಿಸಿದಳು.

ಹೆಚ್ಚೇನೂ ಇಲ್ಲ. ನಾಳೆವಾರ ಹಚ್ಚಡ ಒಗೆಯಬೇಕೆಂದು ಪ್ರೋಗ್ರಾಂ ಹಾಕಿದೆ ಇದನ್ನು ಕೇಳಿ, ಆರುಬಾರು ಸೋಪು, ½ ಮಣ ಸೀಗೆ, ಒಂದು

ಮಕರಿ ಚೌಳುಮಣ್ಣು, ಬೇಯಿಸುವುದಕ್ಕೆ 5 ಮಣ ಸರ್ವೆ ಸೌದೆ, ಒಂದು ರಾಜಾರಾಣೀ ಸಾಬೂನು ನಾಲ್ಕಾಣೆ ಪಾಷಾಣ ಎಲ್ಲಾ ಪಟ್ಟಿ ಹಾಕಿಟ್ಟಿದ್ದಾಳೆ ನನ್ನಾಕೆ.

ಮುಂದಿನ ತಿಂಗಳು ಮ್ಯಾಚಿಗೆ ಬರುವಾಗ ತರುತ್ತೇನೆ ನೋಡು. ಗುರುತೇ ಸಿಗಲಾರದು ಅದು ನನಗೆ 9 ವರ್ಷದಿಂದ All purpose rug ಆಗಿದೆ. ಹೋರ್ಡ್ನಾಲು, ಜಮ್ಖಾನ, ಕಂಬಳಿ, ಕೆಲವೇಳೆ ಟವಲು, ಪಂಚೆ ಕೂಡ ಆಗಿದೆ ಪ್ರಯಾಣದಲ್ಲಿ !

ವೃಥಾ ತೊಂದರೆ ಕೊಟ್ಟೆ. ಕ್ಷಮಿಸು ರಗ್ಗು ಪತ್ತೆಯಾದಾಗಿನಿಂದ ಮನಸ್ಸು ಉಲ್ಲಾಸವಾಗಿದೆ. ರಜ ತೆಗೆದುಕೊಂಡೆ ಈ ದಿನ. ನುಗ್ಗೇಕಾಯಿ ಹುಳಿಮಾಡಿ ಸಂಡಿಗೆ ಕರೀ ಅಂದಿದ್ದೇನೆ. ಅಷ್ಟೆ. ಅರರೆ! ನನ್ನೆದುರಿಗೆ ಬಾಗಿಲ ಮೂಲೆ ಯಲ್ಲಿರುವ ರಗ್ಗನ್ನು ಯಾರೋ ಮೆಲ್ಲಗೆ ಎಳೆದಂತೆ ತೋರುತ್ತೆ ಒಳಗಿಂದ. ಏನೋ ಕೃತ್ರಿಮ !

ಇಂತು–ರಾಮು.

ದಯಾನಿಧೇ! ಸದ್ಯ ದುಪಟಿ ವ್ಯವಹಾರ ನಿಂತಿಲ್ಲ! ಒಂದು ಬಟ್ಟಲು ಚಾ ಹೀರೋಣ ಅಂತ ಎದ್ದು ಹೊರಟೆ.

—ಟೀಯಸ್ಸಾರ್ರಾವ್.



ಪಂಗ ಭಂಗ

# ಫಣಿಯಪ್ಪನ ಹುಲಿಗಳು

---

ನಮ್ಮೂರಿನ ಸುಪ್ರಸಿದ್ಧ ಶಿಕಾರಿ Fearless ಫಣಿಯಪ್ಪನನ್ನು ಆ ದಿನ ಏನುಮಾಡಿದರೂ ತಪ್ಪಿಸಿಕೊಳ್ಳಲಾಗಲಿಲ್ಲ ರೈಲಿನಲ್ಲಿ. ಏಕೆಂದರೆ ಬೇರೆ ಡಬ್ಬಿಗಳಲ್ಲಿ 'ಬಾಗಿಲು ಯಾವುದು' ಅಂತ ಪತ್ತೆಯಾಗದಂತೆ ಜನ ಮುತ್ತಿಕೊಂಡಿದ್ದರು. ಈತ ನಮ್ಮ ಕಡೆ ಕಾಡಿನ ಖಗಮೃಗಗಳನ್ನು ಹೊಡೆದಿರುವುದಕ್ಕಿಂತ 'ಹೊಡೆದಿರುವೆ'ನೆಂದು ಹೇಳಿಕೊಳ್ಳುವ ಕತೆಗಳೇ ಹೆಚ್ಚು, ಹಾಗೂ ಸ್ವಾರಸ್ಯ ಎನ್ನುವುದನ್ನು ಎಲ್ಲರೂ ಬಲ್ಲರು

'ಈಗಲೋ, ಆಗಲೋ ಈತನ ಸಂಭಾಷಣೆಗೆ ತುತ್ತಾಗಬೇಕಲ್ಲಾ' ಎಂದು ನಾಲ್ಕು ಜನ ಮೊಸರಿನವರ ಮಧ್ಯೆ ಸಿಕ್ಕಿಕೊಂಡು, ದೋಸೆ ಮಧ್ಯದ ಚಟ್ನಿಯಾಗಿ, ಮುದುರಿಕೊಂಡು ಮುಂದಿನವನ ಹಳ್ಳಿ ತಲೆಯ ವಾಸನೆಯನ್ನು ಉಚ್ಛ್ವಸಿಸುತ್ತಾ ನಿಂತಿದ್ದ ನನ್ನ ವಾಸನೆ ಫಣಿಯಪ್ಪನಿಗೆ ತಗುಲಿದೊಡನೆಯೇ, ಆತ ನನ್ನ ಕೈಹಿಡಿದು ಸೆಳೆದುಕೊಂಡ ತನ್ನ ಕಡೆಗೆ. ನಾನು ಮೊಸರಿನವರ ಗೊಂಚಲಿನಿಂದ ಕಿತ್ತು ಬಂದೆ. ನನ್ನ ಚಪ್ಪಲಿಗಳು ಕಳಚಿ ಸಂದಿನಲ್ಲಿ ಮಾಯವಾದುವು ಫಣಿಯಪ್ಪ ಮೈಯನ್ನು ಅಕ್ಕಪಕ್ಕಕ್ಕೆ ಎರಡು ಸಾರಿ ಹೊರಳಿಸಿ, ಒಂದು ತೊಡೆ ಎತ್ತಿ ಇನ್ನೊಂದರಮೇಲಿಟ್ಟುಕೊಂಡ. ನಾನು ಮಲಗಿಕೊಳ್ಳುವಷ್ಟು ಸ್ಥಳವಾಯಿತು ಕೂತುಕೊಂಡೆ.

"ನಾನು ಡಬ್ಬಲ್-ಹುಲಿ ಮಾರ್ಕಿನ ಬೀಡಿ ಉಪಯೋಗಿಸುವುದು—ಹಚ್ಚಿ ಒಂದು" ಅಂತ ಕಟ್ಟು ತೆಗೆದ, "ಕ್ಷಮಿಸಿ, ಅಭ್ಯಾಸವಿಲ್ಲ" ಅಂತ ಸಾರಾದೆ.

"ನನ್ನ ಹತ್ತಿರ ಗನ್‌ಲೈಸೆನ್ಸ್ ಇರುವುದಕ್ಕೂ, ನಾನು ಹುಲಿಮಾರ್ಕು ಬೀಡಿಯನ್ನೇ ಉಪಯೋಗಿಸುವುದಕ್ಕೂ, ನನ್ನ ಮೀಸೆಗೂ ಅನೇಕರು ಸಂಬಂಧ ಹುಡುಕುವುಕ್ಕೆ ಬುಡವಿಲ್ಲವಾದರೂ, ಇದರ ರುಚಿ ಬಲ್ಲವನೇ ಬಲ್ಲ" ಅಂತ ಕಟ್ಟು ಒಳಗಿಟ್ಟು ಕಡ್ಡಿ ಹಚ್ಚಿದ. "ಚಿಂತೆಯಿಲ್ಲ. ಗಾಳಿ ಜೋರಾಗಿದೆ—ನನಗೆ ಈಚೆಗೆ, ರೈಲಿನಲ್ಲಿ ವಾಂತಿಯಾಗುವುದು ನಿಂತಿದೆ" ಅಂತ ಸ್ವಲ್ಪ ಸರಿದು ಮೂಲೆ ಹಿಡಿದೆ. ಆತ ಬೀಡಿ ಕೊಡವಿಕೊಂಡು ಮುಂದರಿದ.

'ನಾನೇನು ಇವತ್ತು ನಿನ್ನೆಯಿಂದ ಆಲ್ಲಾಸ್ವಾಮಿ ಇದನ್ನ ಸೇದೋದು. ನನ್ನನ್ನ ನಮ್ಮಪ್ಪ ಕನ್ನಡ ಲೋಯರ್ ಸೆಕೆಂಡ್ರಿಯಿಂದ ಹಿಂದಕ್ಕೆ ಕರೆಸ್ಕೊಳ್ಳೋದಕ್ಕೆ ಒಂದು ವರ್ಷ ಮುಂಚಿನಿಂದಲೇ ಶುರುಮಾಡಿದ್ದೆ'. ಹೇಗಿದ್ದರೂ ಬೇಜಾರು.

" ನಿದ್ದೆ " !  ಅದೂ ಈ ಮನುಷ್ಯನ ಪಕ್ಕದಲ್ಲಿ !  ಸುತರಾಂ ಸಾಧ್ಯವಿಲ್ಲದ ಮಾತು.  ಮಾತಾದರೂ ಆಡೋಣ ಅಂತ ನಾನೇ ಬಾಯಿಬಿಟ್ಟೆ.

" ನೋಡಿದಿರಾ ! 'ಡಬ್ಬಲ್ ಹುಲಿ' ಇಂದ ತಕ್ಷಣ ಜ್ಞಾಪಕವಾಯಿತು, ಮೊನ್ನೆ ಯಾರೋ ಎರಡು ಹುಲಿ ಹೊಡೆದರಂತೆ ನಿಜವೇ " ? ಎಂದೆ.

" ಉಂಟೇ ಸ್ವಾಮಿ ಎಲ್ಲಾದರೂ ?  ನಾನು ಹೇಳಿರಲಿಲ್ಲವೆ--ಒಂದು ಸಾರಿ ನಾನು ಬಂದೂಕ ಬಾರ್ ಮಾಡಿದಮೇಲೆ ಗೊತ್ತಾಯ್ತು 'ಹೆಣ್ಣು' ಅಂತ.  ಅದಕ್ಕೇ ಸುಮ್ನೆ ಒಂದು ಕಾಲು ಮುರಿದು ಬಿಟ್ಟಿದ್ದೆ ಅಂತ ?  ಆ 'ಮರೀ'ನ, ಹೊಡಿಯೋದಕ್ಕೇಂತ ಡಬ್ಬಲ್ ಶಿಕಾರಿಗಳು ಹೋಗಿ ಸಿಂಗಲ್ ಆಗಿ ಬಂದ ಮಾತಲ್ಲವೇ ನೀವು ಹೇಳ್ತಾ ಇರೋದು ? "

" ಓ.... ಹಾಗೇನು ? "

" ಸರಿ.  ಮತ್ತೆಷ್ಟಲ್ದೆ '....ನಮ್ಮ ಕಾಡಿನ ಹುಲಿಗಳ ಕಿಲಾಡಿತನ ನನಗೆ ಗೊತ್ತಿಲ್ಲವೆ ?  ಯಾವ ಗಂಡಸಿಗೆ ಚರ್ಬಿ ಇದ್ರೀ ?  ಬಂದೂಕ್ ಬಾರು ಮಾಡಿ ಬದುಕಿ ಬರೋ ಅಷ್ಟು ? "

" ತ್ಚು....ತ್ಚು....ತ್ಚು "

" ಮೈಸೂರು ಹುಲಿಗಳು ಕಿಲಾಡಿ ಕೋಮಿನವು ಅನ್ನೋದಕ್ಕೆ ಹೇಳ್ತೀನ್ಕೇಳೀ—ಮೊನ್ನೆ ದಸರಾದಲ್ಲಿ ವಿಜಯದಶ್ಮೀಕ್ಕೂಡ ಚಕ್ಕರ್ ಹೊಡೆದು ಹುಲಿಕಲ್ ಕಾಡಿಗೆ ಹೋದೆ.  ಯಾವಾಗ ಶಿಕಾರಿಗೆ ಹೋದರೂ, ನಾನಾಯ್ತು ನನ್ನ ಬಂದೂಕವಾಯ್ತು.  ಬೇರೆ ಒಂದು ನರಪ್ರಾಣಿ ಕಟ್ಕೊಂಡು ಹೋಗುಲ್ಲ ನಾನು.  ಹೋದೆ.  ಇನ್ನೂ ಮಟಮಟ ಮಧ್ಯಾನ್ನ.  ಒಂದು ಬೀಡಿ ಹಚ್ಚಿ, ದಂ-ತಗೊಳ್ಳೋಣಾಂತ ಕೂತೆ ಸ್ವಾಮಿ ಒಂದು ಮರದ ಪಕ್ಕದಲ್ಲಿ.  ಅದು ಬಿದ್ದಮರವಲ್ಲ. 'ಹುಲಿ' ಅಂತ್ಲ ಪತ್ತೆಯಾದದ್ದು ಅದರ ಮುದುರಿದ ಬಾಲ ನೆಲಕ್ಕೆ ಬಡಿದಾಗಲೇ  ನನ್ನ ಬಾಯಿಂದ ಬೀಡಿ ಕೆಳಗೆ ಬಿತ್ತು.  ನನ್ನ ಕೈಕಾಲಿನ ತಾಖತ್ತೆಲ್ಲಾ ಹಾಗೇ ನೆಲಸಮವಾಯ್ತೂಂತನ್ನಿ.  ಎಂಥಾ ಹುಲೀಂತೀರಿ!  ಭಾ ೯ ೯ ೯ ರಿ ೯  ....ಬಹು ಭಾರೀ ಮೈಸೂರು ಗಂಡು ...ಇನ್ನೇನು ಸಿದ್ಧವಾಗಿದೆ . ....

ಎದ್ದೆ ...ಹೇಗೆ ಎದ್ದೆನೋ ಆ ಪರಶಿವ ಬಲ್ಲ.  ಹತ್ತುವುದಕ್ಕೆ ಮರವಿಲ್ಲ— ಮರವಿಲ್ಲವೇನು, ಅಂಥಾ ಸಮಯದಲ್ಲಿ ಕಾಲೇ ಇಲ್ಲ ಅನ್ನಿ.  ಓಡಲು ಪ್ರಯತ್ನ ಪಟ್ಟೆನೋ—ಒಂದೇ ನೆಗೆತಕ್ಕೆ ನನ್ನನ್ನ ಒಂದು ಯಃಕಚಿತ್ ಮೊಲದಂತೆ ಅಗಿದು ಬಿಡುತ್ತೆ........ ಏನುಮಾಡೋದು ?  ಅದೆಲ್ಲಿತ್ತೋ ಧೈರ್ಯ ?........ ಅಂಥಾ ಸಮಯದಲ್ಲಿ ಭಗವಂತನೇ ಬಚಾಯಿಸ್ಬೇಕೂ ಅನ್ನೋದು ಸುಳ್ಳುಸ್ವಾಮಿ.  ನಿಮ್ಮ

ಬುದ್ಧಿ ನಿಮ್ಮನ್ಯಾಪಾಡಿದ್ರೇ ಉಂಟು. ಕಾಲು ನಿಗರಿಸಿ ಎದ್ದು ಒಂದು ಹೆಜ್ಜೆ ಯಿಟ್ಟೆತು ಬಾಯಿ ಕಳೆದುಕೊಂಡೇ. ಒಂದು ಭಾರಿ ಗುಹೆ ಅದರ ಬಾಯಿ. ಒಂದು ಸಾರಿ ನಮ್ಮನೆಯಲ್ಲಿ ನಮ್ಮಾಕೆಯ ಹಲ್ಲು ಕೀಳೋವಾಗ ಡಾಕ್ಟ್ರು ಅಷ್ಟು ಗಾಬ್ರಿ ಬಿದ್ದದ್ದು ಯಾಕೇಂತ ಆಗ ತಿಳೀತು ನನಗೆ. ಧೈರ್ಯಮಾಡಿದೆ. 'ತಿರುಪತಿ ತಿಮ್ಮಪ್ಪಾ'ಂದೆ ನುಗ್ಗಿದೆ 'ಗಪ್' ಅಂತ. ಕಳೆದ ಬಾಯಿಗೆ ಕೈ ಇಟ್ಟು ಬಾಯಿನ ಕೆಳಭಾಗಕ್ಕೂ ಮೇಲ್ಭಾಗಕ್ಕೂ ಗೂಟ ಹೊಡೆದಂತೆ ಟೇಕಾ ಕೊಟ್ಟು ಭದ್ರಪಡಿಸಿ ಕೊಂಡೆ. ಗುಡುಗಿನಂತೆ ಕುಣಿಯಲಾರಂಭಿಸಿತು. ಹೀಗೇ ಇದ್ದರೆ ಕೆಲಸ ಕೆಟ್ಟಿತು. ಅಂದಿದ್ದೇ........ ಏನುಮಾಡಿದೆ ಗೊತ್ತೆ? ಅದರ ಹಂಡೆ ಬಾಯಿನಲ್ಲಿ ಮೆಲ್ಲಗೆ ಒಂದೊಂದಾಗಿ ನನ್ನ ಎರಡು ಕಾಲುಗಳನ್ನೂ ತೂರಿಸಿ,— ಏನಾಶ್ಚರ್ಯವಿಲ್ಲ!.... ಇಪ್ಪತ್ತಡಿ ಹುಲಿ ಸ್ವಾಮಿ ಅದು—ಹುಷಾರಾಗಿ ಮೈಯೆಲ್ಲಾ ಒಳಕ್ಕೆಳೆದುಕೊಂಡು ಕೈಬಿಟ್ಟೆ. ವಿಶಾಲವಾಗಿದೆ ಒಳಭಾಗ. ಉಸಿರಾಡೋದಕ್ಕೇಂತೀರಾ? ಅದರ ಎರಡು ಕಿವಿಗಳಿಂದಲೂ ಬರ್ತಾ ಇದ್ದಷ್ಟು ಬೆಳಕೂ ಗಾಳೀ ನಮ್ಮನೆ ನಾಲ್ಕು ಕಿಟಕೀಲಿ ಬರುಲ್ಲಾ ಸ್ವಾಮಿ.

ಹಾಗೇ ಮುಂದೆ ಹೋದೆ. ಅದರ ಹೃದಯ—ಗೇರುಸೊಪ್ಪೆಯಂತೆ ರಕ್ತ ಧುಮುಕುತ್ತಿದೆ ಶ್ವಾಸಕೋಶಗಳು—ಅದು ಉಸಿರೆಳೆದಾಗಲೆಲ್ಲಾ ಒಳಗೆ ಗಾಡಾಂಧ ಕಾರ ಕವಿಯುತ್ತೆ. ಕರೀ ಪಿತ್ತಕೋಶ—ನಮ್ಮೂರಿಗೆ ಬಂದಿರುವ ಅಮೀಲ್ದಾರ್ರ ಪಿತ್ತಕೋಶ ಇನ್ನೂ ಕಪ್ಪಗಿರಬಹುದು. ಹೊಟ್ಟೆ ಸಿಕ್ಕಿತು ಆಮೇಲೆ, ಸುಳ್ಯಾಕೆ ಹೇಳಲಿ. ಒಂದೆರಡು ಕಾಡು ದ್ರಾಕ್ಷಿ ಹಣ್ಣುಗಳನ್ನು ಮಾತ್ರ ಆರಿಸಿಕೊಂಡು ತಿಂದೆ ಅಲ್ಲಿ. ಹಾಗೆ ಆರಿಸುವಾಗ ಕೇವಲ ಕೆಲವು ದಿವಸದ ಹಿಂದೆ ಆ ಕಾಡಿಗೆ ಶಿಕಾರಿ ಹೋಗಿ ಪತ್ತೆ ಇಲ್ಲವಾಗಿದ್ದ ಶಂಭುವಿನ ತಲೆ ಕೂಡ ಇತ್ತು. ಅಯ್ಯೋ ಎಂದೆ. ಇದೇ ಹುಲಿ ಬಾಯಿಗೆ ಕೈಕೊಟ್ಟು ಕತ್ತರಿಸಿಕೊಂಡು ಬಂದ ಕಾಡಯ್ಯನ ವಾಚೂ ಚೈನು ಸಮೇತ ಜಠರದಲ್ಲೇ ಇತ್ತು. ಆರು ಗಂಟೆ ಏಳು ನಿಮಿಷವಾಗಿತ್ತು ಅದರಲ್ಲಿ. ಇದಲ್ಲದೆ ನಾಲ್ಕಾರು ನಾಯಿಗಳು, ಮೂರು ಮೊಲಗಳು, ಎರಡು ಇಲಿಗಳು ಆಟವಾ ಡುತ್ತಿದ್ದುವು ಮುಂದೆ ಹೋದೆ ಹಾಗೇ ತೆವಳಿಕೊಂಡು. ರಸ್ತೆ ಇಕ್ಕಟ್ಟಾಯಿತು— ಕರುಳುಗಳು ಇನ್ನೂ ಇಕ್ಕಟ್ಟಾಯಿತು. ಕೈ ಚಾಚಿದೆ—ಬಾಲ! ಅಲ್ಲಾಡುತ್ತಿದೆ! ತುದಿವರೆಗೆ ಕೈಚಾಚಿದೆ. ತುದಿಸಿಕ್ಕಿತು. ಒಳಗಿನಿಂದಲೇ ಬೆರಳುಗಳನ್ನು ಕೊಂಡಿ ಮಾಡಿ ಬಾಲದ ತುದಿಯನ್ನು ಬಿಗಿಯಾಗಿ ಹಿಡಿದೆ. ಹಿಂದಕ್ಕೆ ಎಳೆಯಲಾರಂಭಿಸಿದೆ. ('ಹೇಗೆ ಗೊತ್ತೆ' ಅಂತ ತನ್ನ ಕೋಟು ಬಿಚ್ಚಿ ತೋಳಿಗೆ ಕೈ ಹಾಕಿ ತುದಿ ಹಿಡಿದು ತೋಳನ್ನು ಹಿಂದಕ್ಕೆ ಎಳೆದು ಒಳಮೈ ಹೊರಮಾಡಿ ತೋರಿಸಿದ)

ಹುಷಾರಾಗಿ ಹಿಂದಕ್ಕೆ ಸರಿಯುತ್ತಾ ಬಂದೆ. ಕರುಳು, ಜಠರ, ಹೃದಯ ಹೀಗೇ ಗಂಟಲುತನಕ. ನಂಬಿದರೆ ನಂಬಿ ಬಿಟ್ಟರೆ ಬಿಡಿ—ಬಾಲದ ಮುಷ್ಟಿ ಮಾತ್ರ

ಬಿಡಲಿಲ್ಲ ಪುನಃ ಬಾಯಿಗೆ ಬಂದು ನಾಲಗೆಗೆ ಬಲವಾಗಿ ಒದ್ದೆ. ಬಾಯಿಬಿಟ್ಟಿತು. ಕೈಕೊಟ್ಟುಕೊಂಡು ಅಡ್ಡಲಾಗಿ—ಹುಷಾರಾಗಿ ನನ್ನ ದೇಹವನ್ನೂ, ಈ ಕೋಟಿನ ತೋಳಿನಂತೆ ಒಳಮೈ ಹೊರಗಾಗಿ ಬರುತ್ತಿದ್ದ ಅದರ ದೇಹವನ್ನು ಹಿಡಿದು ತರುತ್ತಿದ್ದ ಕಪಿಮುಷ್ಟಿಯನ್ನೂ, ವಿಶ್ವಪ್ರಯತ್ನದಿಂದ ಹೊರಕ್ಕೆಳೆದು ಧುಮುಕೇ ಬಿಟ್ಟೆ ಭೂಮಿಗೆ! ಆದರೂ ಕಿಲಾಡಿ ಹುಲಿ ಅದು. ಸ್ವಲ್ಪ ಒದ್ದಾಡಿ ನಿಂತೇ ಬಿಟ್ಟಿತು. ಆದರೇನು, ಚರ್ಮ ಒಳಗೆ—ಮಾಂಸ ಹೊರಗೆ, ಹಲ್ಲು ಹೊರಗೆ-ಮೀಸೆ ಒಳಗೆ...."

"ಬುರುಡೆ ಅನ್ನಬಹುದು ನೀವು. ಬೇಕಾದರೆ ಹೋಗಿ ನೋಡಿ ಹುಲಿಕಲ್ಲಿಗೆ—ಇವತ್ತಿಗೂ ಓಡಾಡುತ್ತಿದೆ ಅದೇ ಹುಲಿ—ಅದೇ ಸ್ಥಿತಿಯಲ್ಲಿ ನನಗಾಗಿ ಕಾಯುತ್ತಿದೆ-ಎಂದು ಬಂದು ತಿರುವಿಹಾಕುತ್ತಾನೋ ಪುಣ್ಯಾತ್ಮ ಅಂತ".

'ಇಷ್ಟು ಬಲವಾದ ಬುರುಡೆ ಬಿಡುವುದಕ್ಕೆ ನಾಚಿಕೆಯಾಗುವುದಿಲ್ಲವೇ ಈ ಘಟಕ್ಕೆ' ಅನ್ನಿಸಿತು. ಆದರೂ ಆತನ ವಾಕ್ಚಾತುರ್ಯಕ್ಕೆ ಸಮ್ಮತ ಹೊಡೆದು ನಾನು ತೆಪ್ಪಗೆ ಕೂತರೆ, ಆತ ಬಿಡಬೇಕಲ್ಲ!

"ಇದಕ್ಕೇನು ಸ್ವಾಮಿ ಇಷ್ಟು ಆಶ್ಚರ್ಯಪಡ್ತೀರಿ. ಇಂಥದ್ದು ನೂರಾರು ಅನುಭವ ಆಗಿದೆ ನನಗೆ. ಇನ್ನೂ ಎಂತೆಂಥ ಕಿಲಾಡಿ ಹುಲಿಗಳಿವೆ ಅಂತೀರಿ ಹುಲಿಕಲ್ ಕಾಡಿನಲ್ಲಿ". (ನನ್ನ ಮುಖದಲ್ಲಿನ ಬೇಜಾರು, ಆಕಳಿಕೆಗಳನ್ನು ಅಲಕ್ಷಿಸಿ ಮುಂದುವರಿಸಿದ ಪಾಪಿ!)

"ನನಗೆ ರಾತ್ರಿ ಷಿಕಾರಿ ಬಹು ಇಷ್ಟ ಕಾಡಿನಲ್ಲಿ ಕ್ಯಾಂಪ್ ಮಾಡಿ ವಾರಗಟ್ಟಲೆ ರಾತ್ರಿ ಷಿಕಾರಿ ಮಾಡುವುದುಂಟು ನಾನು. ರಾತ್ರಿ ಹನ್ನೆರಡು ಗಂಟೆಮೇಲೆ ಹೊರಟು ನನ್ನ ಮಾಮೂಲು ಮರದ ಪೊಟರೆಯಲ್ಲಿ ಕೂತು ಸುತ್ತಲೂ ನೋಡುವುದು. ಹಗಲಿಗಿಂತ ಬೇಗ ಪತ್ತೆಯಾಗುತ್ತವೆ ನನ್ನ ಕಣ್ಣಿಗೆ ಹುಲಿಗಳು ರಾತ್ರಿಯಲ್ಲಿ; ಹೊಳಪಾಗಿ ಝುಳಪಿಸುವ ಎರಡು ಕಣ್ಣುಗಳೇ ಕಾಣಿಸುವುದು ಅಮಾವಾಸ್ಯೆ ಕತ್ತಲಿನಲ್ಲಿ. ಸರಿಯಾಗಿ ಎರಡು ಕಣ್ಣುಗಳ ಮಧ್ಯಕ್ಕೆ ಗುರಿ ಇಟ್ಟು ಹೊಡೆದು ಬಂದು ಮಲಗಿದರೆ, ಬೆಳಿಗೆದ್ದು ನನ್ನ ಕಡೆಯವರು ಹೋಗಿ ಹುಲಿಯ ಶವ ಎತ್ತಿಕೊಂಡು ಬರುವುದು ವಾಡಿಕೆ. ಹೀಗೇ, ನೂರಾರು ಚರ್ಮಗಳನ್ನು ಮನೆಯಲ್ಲಿ ಹಾಸಿರುವುದು ನಾನು".

ನಾನು ಒಂದು ಸಾರಿ ಕಣ್ಣುಜ್ಜಿಕೊಂಡು, ಒಂದು ಆಸ್ಪರಿನ್ ಗುಳಿಗೆ ನುಂಗಿದೆ. ಆತನಿಗೆ ಕರುಣ ಬರಲಿಲ್ಲ.

"ಒಂದು ಸಾರಿ, ಹೀಗೇ ಹೊರಟೆ ಶಿಕಾರಿ. ಮೊನ್ನೆ ಮೊನ್ನೇಂದ್ರೇ. ಹೋಗಿ ಎಂದಿನಂತೆ ಅಮಾವಾಸ್ಯೆ ರಾತ್ರಿ ಗುರಿ ಇಟ್ಟು ಹೊಡೆದು ಬಂದು ಕ್ಯಾಂಪಿನಲ್ಲಿ ಮಲಗಿದೆ. ಬೆಳಗ್ಗೆ ಎದ್ದು ಕಾಡೆಲ್ಲಾ ಹುಡುಕಿದರೂ ಒಂದು ಸತ್ತ ಬೆಕ್ಕಿನ ಶವ ಕೂಡ ಸಿಕ್ಕಲಿಲ್ಲ. ನನ್ನ ಗುರಿ ತಪ್ಪುವುದೆಂದರೆ ಅರ್ಥವೇ ಇಲ್ಲಸ್ವಾಮಿ. ನನಗೆ

ರೇಗಿತು—ಆಶ್ಚರ್ಯವೂ ಆಯಿತು. 'ಇರಲಿ, ಮಾಡುತ್ತೇನೆ' ಅಂತ ಮರಳಿ ಯತ್ನ ಮಾಡಿದೆ ಮಾರನೇ ರಾತ್ರಿ. ಹೆಣ ಬೀಳಲಿಲ್ಲ ಹೀಗೆ ಮೂರು ರಾತ್ರಿ ವ್ಯರ್ಥವಾದಮೇಲೆ ಒಂದು ಉಪಾಯ ಹೂಡಿದೆ! ಊರಿನಿಂದ ಸಾಹುಕಾರ್ ಸಣ್ಣಯ್ಯನ ಕಾರು ತಂದು ಶಿಕಾರಿ ಸ್ಥಳದಲ್ಲಿ ನಿಲ್ಲಿಸಿದೆವು—ಹುಲಿಗಳು ಇರುತ್ತಿದ್ದ ಸ್ಥಳಕ್ಕೆ ಎದುರಾಗಿ ನಿಲ್ಲಿಸಿದೆವು. 'ರಾತ್ರಿ ಎಂದಿನಂತೆ ನಾನು ಬಂದೂಕು ಬಾರ್ ಮಾಡಿ, ಗುಂಡು ಹಾರಿಸಿದ ಕೂಡಲೆ ಕಾರಿನ ಲೈಟುಗಳನ್ನು ಬೇಟೀ ಸ್ಥಳಕ್ಕೆ ಜೋರಾಗಿ ಬಿಟ್ಟು ಈ ಐಬನ್ನು ಪತ್ತೆ ಹಚ್ಚಬೇಕು' ಅಂತ ಏರ್ಪಾಡಾಯಿತು. ಎಲ್ಲಾ ಸಿದ್ಧವಾಯಿತು ರಾತ್ರಿ ಹೋದೆವು. ಕಾರ್ಗತ್ತಲು. ಎಂದಿನಂತೆ ಎರಡು ಕಣ್ಣುಗಳು ಝುಳಪಿಸುತ್ತಿವೆ. ಗುಂಡು ಹಾರಿತು-ಬಿಟ್ಟರು ಭಾರೀ ಲೈಟುಗಳನ್ನು ಎರಡನ್ನೂ. ಪತ್ತೆಯಾಯಿತು ಮರ್ಮ! ಏನು? ಗುಂಡು ಎಲ್ಲಿಹೋಯಿತು ಅಂತ".

ನನ್ನ ಕುತೂಹಲ ಸ್ವಲ್ಪ ಕೆರಳಿತು. ಆಶ್ಚರ್ಯದಿಂದ ಬಾಯಿ ಬಿಟ್ಟು ಕೂತೆ, ಕಣ್ಣು ಅಗಲಿಸಿಕೊಂಡು.

"ಹುಲಿ ಸಿಕ್ಕಿತು. ಆದರೆ ಒಂದಲ್ಲ – ಎರಡು ಸಿಕ್ಕಿದುವು ಏನುಮಾಡಿವೆ ಗೊತ್ತೆ? ಒಂದರ ಪಕ್ಕದಲ್ಲಿ ಒಂದು ನಿಂತುಕೊಂಡು, ಒಂದು ಹುಲಿ ಬಲಗಣ್ಣನ್ನೂ, ಒಂದು ಹುಲಿ ಎಡಗಣ್ಣನ್ನೂ ಮುಚ್ಚಿಕೊಂಡಿವೆ. ನಾನು ಹೊಡೆದ ಗುಂಡು ಎರಡು ಕಣ್ಣುಗಳ ಮಧ್ಯೆ ಗಾಳಿಯಲ್ಲಿ ಮಾಯವಾಯಿತು!........ ..ಹೇಗಿದೆ ಮೈಸೂರು ಹುಲಿಗಳ ಕಿಲಾಡಿತನ?.... ......."

ಅಷ್ಟರಲ್ಲಿ ನಮ್ಮೂರು ಕೆರೆ ಕಾಣಿಸಿತು. ಚೀಲ, ಚಪ್ಪಲಿ, ಚೊಂಬು ಹುಡುಕಿ ಎತ್ತಿಟ್ಟುಕೊಂಡೆ. "ಎಲಾ, ಇಷ್ಟು ಗಡವನಾಗಿ, ಎಮ್ಮೆ ಹಾಗಿದ್ದಾನೆ—ಈತ ಚಿಕ್ಕಮಕ್ಕಳಿಗೆ ಹೊಡೆದಂತೆ ಇಂಥಾ ಭಾರೀ ಬುರುಡೆ ಬಿಡುತ್ತಾನಲ್ಲ . .... ಕೊಂಚವೂ ನಯ ...ನಾಚಿಕೆ? ನಂಜನಗೂಡು ಆಚೆಗೆ ಇರಬಹುದು ಇವನ ಹುಟ್ಟಿದ ಸ್ಥಳ" ಅಂದುಕೊಂಡು ಸ್ಟೇಷನ್ ಕಾಣಿಸುತ್ತಲೂ ಏಳುವುದಕ್ಕೆ ಪ್ರಯತ್ನಿಸಿದ ಕೂಡಲೆ ಹೇಳಿದ ;

"ಹೇಗಿದೆ ಸ್ವಾಮಿ ಕತೆಗಳು? 'ಯಾರು ಭಾರೀ ಬುರುಡೆ ಬಿಡುತ್ತಾರೆ' ಅನ್ನೋಪಂದ್ಯದಲ್ಲಿ ಮೊನ್ನೆ ಈ ಕತೆಗಳನ್ನು ಹೇಳಿ ನಾನು ಆರುದೋಸೆ, ನಾಲ್ಕು ಇಡ್ಲಿಗಳನ್ನು ಗೆದ್ದೆ ನಮ್ಮೂರಿನಲ್ಲಿ. ಬೇಜಾರಾಯಿತೇನೋ ನಿಮಗೆ. ಇನ್ನೊಂದು ಸಾರಿ ಸಿಕ್ಕಾಗ "ವ್ಯಾಘ್ರ" ಎನ್ನೋ ಬಿರುದು ಬಂದ ಕತೆ ಹೇಳುತ್ತೇನೆ—ನಮಸ್ಕಾರ."

—ಟೀಯೆಸ್ಸಾರ್ರಾವ್

# ತಂತ್ರ್ಯ-ಸ್ವಾ(ಹಾ) ಇಲ್ಲವೆ
# Partitionಊ Planninಗ್ ಊ

ಶ್ರೀರಂಗ

ಸ್ವಾತಂತ್ರ್ಯಸ್ವೀಕಾರದ ದಿನ ಆಗಸ್ಟ್ ೧೫ ಎಂದು ಗೊತ್ತುಮಾಡಿದ್ದು ನಮ್ಮೂರವರಿಗೆ ದೊಡ್ಡ ತೊಂದರೆಯಾಗಿದೆ. ಹದಿನೈದು ದಿನಗಳಿಗೊಮ್ಮೆ ಸೀದಾಕೊಡುವ ಪದ್ಧತಿ ನಮ್ಮಲ್ಲಿ; ಆದ್ದರಿಂದ ೧೫ನೆಯ ತಾರೀಕು ಅಂದರೆ ಕೊನೆಯ ದಿನ ಎನ್ನಿಸಿ ಸೀದಾ ಧಾನ್ಯ ಮುಗಿದು ೨-೩ ದಿನಗಳಾಗಿರುವವು ; ಇದಲ್ಲದೆ ೧೬ ಶನಿವಾರ ನಮ್ಮ ಸೀದಾ ಅಂಗಡಿಗಳಿಗೆ ರಜೆ. ಅಲ್ಲ- ಅಂತೂ—ಸ್ವಾತಂತ್ರ್ಯದಿನವನ್ನು ಹಬ್ಬವನ್ನಾಗಿ ಆಚರಿಸಬೇಕೆಂದರೆ ತಾ॥ ೧೫ ಪೂರ್ತಿ ಅನನುಕೂಲ, ೧೬ ರಜೆ; ಆದ್ದರಿಂದ ಆಗಸ್ಟ್ ೧೭ಕ್ಕಾಗಲಿ ೧೭ಕ್ಕಾಗಲಿ ಅಧಿಕಾರ ಬದಲಾವಣೆ ಮಾಡಬೇಕೆಂದು ನಮ್ಮ ಸಲಹೆ.

ಹಾಗೆ ಕೇಳಿದರೆ ಇನ್ನೂ ಅನೇಕ ಮಹತ್ತ್ವದ ಕಾರಣಗಳಿವೆ ಇಷ್ಟೊಂದು ಅವಸರ ಮಾಡದೆ ಇರುವುದಕ್ಕಾಗಿ. ಮೊದಲ ಮಾತೆಂದರೆ, ಸ್ವಾತಂತ್ರ್ಯದ ವಿಭಜನೆ ಪೂರ್ತಿಯಾಗಿಲ್ಲ. ಇಷ್ಟೇಕೆ? ಕಾಂಗ್ರೆಸ-ಲೀಗಗಳಲ್ಲಿ 'ಸ್ವಾ' ಯಾರ ಪಾಲಿಗೆ, 'ತಂತ್ರ್ಯ' ಯಾರ ಪಾಲಿಗೆ ಎಂಬುದರ ನಿರ್ಣಯ ಕೂಡ ಇನ್ನೂ ಆಗಿಲ್ಲ! ಮೊದಲ ಹೆಜ್ಜೆ ಕೂಡ ಇಟ್ಟಿಲ್ಲವೆಂದಮೇಲೆ ಎರಡನೆಯ ಮತ್ತು ತರುವಾಯದ ಹೆಜ್ಜೆಗಳನ್ನಿಡುವುದು ಹೇಗೆ? ಅಥವಾ, ಬಲದಿಂದ ಎಡಕ್ಕೆ ಬರೆಯುವ ಸಂಸ್ಕೃತಿಯು ಮುಸ್ಲಿಂ ಲೀಗದ ಪ್ರೀತ್ಯರ್ಥ ಹೆಜ್ಜೆಗಳನ್ನೂ ಕೊನೆಯಿಂದ ಪ್ರಾರಂಭಿಸುವುದಿದೆಯೊ? ಇಲ್ಲವೆ. 'ತಂತ್ರ್ಯ-ಸ್ವಾ' ಎಂದು ಸ್ವಾತಂತ್ರ್ಯದ ಉಚ್ಚಾರವನ್ನು ಬದಲಾಯಿಸುವುದಿದೆಯೊ? ಹೇಳುವ ತಾತ್ಪರ್ಯವೇನೆಂದರೆ, ಸ್ವಾತಂತ್ರ್ಯದ ವಿಭಜನೆ ಸಂಪೂರ್ತಿ ಆಗಿಲ್ಲ, ಸಮಂಜಸವೂ ಆಗಿಲ್ಲ.

ಡಿಲ್ಲಿಯಲ್ಲಿ ನೆರೆದ 'ಮುಕ್ಕಂಡ'ರು ಈ ಮಾತನ್ನು ಪೂರ್ತಿಯಾಗಿ ಅರಿತುಕೊಂಡು ಅಧಿಕಾರ ವರ್ಗಾಯಿಸುವ ದಿನವನ್ನು ಮುಂದೆ ಹಾಕಬೇಕೆಂದು ನಮ್ಮ ಸೂಚನೆ—ಅಲ್ಲ-ನಮ್ಮ ಸೂಚನೆ. ಈ 'ಮುಕ್ಕಂಡ'ರು ತಮ್ಮ ಉರಿಗಣ್ಣಿನಿಂದ ಸುತ್ತಲೂ ನೋಡಿ ಪಂಜಾಬ-ಬಂಗಾಲಗಳಲ್ಲಿ ಸುಡುವುದೇನ್ನೂ ಉಳಿದಿಲ್ಲವಾದ್ದರಿಂದ ಸ್ವಾತಂತ್ರ್ಯದಿನವನ್ನು ಮುಂದೂಡುವುದರಲ್ಲಿ ಅರ್ಥವಿಲ್ಲ ಎಂದು ವಾದಿಸಬಹುದು. ಅದಕ್ಕಾಗಿಯೆ ನಮ್ಮೂರಿನ ಮಾತನ್ನು ಇಲ್ಲಿ ಹೇಳುತ್ತಲಿದ್ದೇನೆ. ನಮ್ಮೂರು ಪಂಜಾಬದಲ್ಲೂ ಇಲ್ಲ, ಬಂಗಾಲಕ್ಕೂ (ಭಾಷಾಂತರಗಳನ್ನು ಬಿಟ್ಟರೆ) ಸಂಬಂಧಿಸಿಲ್ಲ. V ಅಂದ್ರೆ Victory ಅನ್ನೋಹಾಗೆ K ಅಂದ್ರೆ ('ಕೇಂದ್ರ' ಶಬ್ದದ ನಿಜವಾದ

ವ್ಯಕ್ತಿತ್ವ ಇದು) Karnataka ಎಂಬ ಊರು ನಮ್ಮದು. ದಿಲ್ಲಿಯಲ್ಲಿಯೇ ಕುಳಿತುಕೊಂಡವರು ಸ್ವಾತಂತ್ರ್ಯವನ್ನು ಹಂಚಿಕೊಂಡರೆ ನಮ್ಮೂರವರ ಪಾಲಿಗೆ ಸ್ವಾತಂತ್ರ್ಯ ಉಳಿಯಲಿಕ್ಕಿಲ್ಲ ಎಂದು ನಮ್ಮ ಹೆದರಿಕೆ; ಸ್ವಾತಂತ್ರ್ಯ ಎಂದರೆ ವಿಭಜನೆ. ಆದ್ದರಿಂದ ನಮ್ಮೂರವರ ಪಾಲಿಗೆ ವಿಭಜನೆ ಉಳಿಯಲಿಕ್ಕಿಲ್ಲ ಎಂದು ನಮ್ಮ ಹೆದರಿಕೆ.

ಮೊದಲು 'ಉದ್ವಾಹ' (Communications)ದ ದೃಷ್ಟಾಂತವನ್ನು ನೋಡೋಣ. ಬಂಗಾಲ-ಆಸಾಮ ರೈಲುದಾರಿಯು ವಿಭಜನೆಯಾಗಿರುವುದೆಂದು ಕೇಳಿರುವಿರಷ್ಟೆ? ಆದರೆ ನಮ್ಮನ್ನು— ಕರ್ನಾಟಕವನ್ನು— ಅಲಕ್ಷಿಸುವುದೇಕೆ? ಕರ್ನಾಟಕದಲ್ಲಿ ರೈಲುದಾರಿ ಇರಲಿಕ್ಕಿಲ್ಲ; ಆದರೆ 'ಉದ್ವಾಹ' ಸಾಧನ ಇದೆಯಷ್ಟೆ? ಸಾಮಾನ್ಯವಾಗಿ ಪ್ರತಿಯೊಂದು ನಗರದಲ್ಲಿ ಟಾಂಗಾಗಳಿವೆ; ಈ ಟಾಂಗಾಗಳಿಗೆ ಹೂಡಿದ ಕುದುರೆಗಳಿವೆ. ಈ ಕುದುರೆಗಳ ಪರಸ್ಪರ ಸ್ಥಳಾಂತರ ಆಗುವುದು ಅವಶ್ಯವಿಲ್ಲವೆ? ಯಾಕೆಂದರೆ, ಪಾಕಿಸ್ತಾನವಿರುವಾಗ ಈ ಪ್ರಾಣಿಗಳಿಗೆ ನಮ್ಮಲ್ಲಿ ವ್ಯವಹಾರವೆ ಕಟ್ಟಾಗುವುದು. ನಮ್ಮ ಪ್ರಾಂತದ ಭಾಷೆ ಕನ್ನಡ; ಈ ಪ್ರಾಣಿಗಳ ಭಾಷೆ 'ಕುರ್ದು'. ಆದ್ದರಿಂದ ಈ ವಿಭಜನೆ (ಪರಸ್ಪರ) ಆಗುವುದು ಅತ್ಯಗತ್ಯವಿದೆ ಈ ಪ್ರಾಣಿಗಳ ಆರೋಗ್ಯ-ನಡತೆಗಳನ್ನು ಲಕ್ಷ್ಯದಲ್ಲಿಟ್ಟು ಇವುಗಳನ್ನು 'ಸಶಸ್ತ್ರದಳ' (armoured section) ಎಂದು ವಿನಿಮಯಮಾಡಲೂ ನಮ್ಮ ಅಡ್ಡಿ ಇಲ್ಲ.

[ಟೀಪು :—ಇದೇ ಸಂದರ್ಭದಲ್ಲಿ ನಮ್ಮಲ್ಲಿದ್ದ ಇನ್ನೊಂದು ವರ್ಗದ ಪ್ರಾಣಿಗಳ ವಿಷಯವನ್ನು ಸೂಚಿಸದೆ ಗತ್ಯಂತರವಿಲ್ಲ. ಈ ಪ್ರಾಣಿಗಳಿಗೆ ಗ್ರ್ಯಾಜುಯೇಟ್ ಎನ್ನುತ್ತಾರೆ. ಇವುಗಳ daily ವ್ಯವಹಾರದ languageಉ 'ಕೆಂಗ್ಲಿಷ್' ಸದ್ಯಕ್ಕೆ ಪಾಪ! ಮವುಂಟಬ್ಯಾಟನರೊಬ್ಬರೆ ಉಳಿಯುವರಾದ್ದರಿಂದ ಅವರಿಗೆ ಹೊತ್ತು ಕಳೆಯಲು ಅನುಕೂಲವಾಗಲು ಈ ಗ್ರ್ಯಾಜುಯೇಟುಗಳನ್ನು ನಾವು ಇಟ್ಟುಕೊಳ್ಳಬಹುದು. ಆದರೆ ಅವರೂ ಅಧಿಕಾರ ಮುಗಿಸಿಕೊಂಡು ಹೋಗುವಾಗ ಮಾತ್ರ ಮರೆಯದೆ ಈ ಗ್ರ್ಯಾಜುಯೇಟುಗಳನ್ನು ಅವರೊಡನೆ ವರ್ಗಾಯಿಸಬೇಕು.]

ಉದ್ವಾಹದಂತೆ ವಸ್ತುಸಂಗ್ರಹದ ವಿಭಜನೆಯು ಮಹತ್ತ್ವದ ಮಾತಾಗಿದೆ. ಉದಾಹರಣೆಗಾಗಿ, ಬಿಜಾಪುರದ ಗೋಲ ಯಾನೆ ಬೋಲ — ಗುಮ್ಮಟ ಯಾನೆ ಗುಮುಝು ಎಂಬುದನ್ನು ತೆಗೆದುಕೊಳ್ಳೋಣ. ಛೆ! ಎಂತಹ ಹುಚ್ಚು! 'ತೆಗೆದು ಕೊಳ್ಳೋಣ' ಎಂತೆ! ತೆಗೆದುಕೊಳ್ಳಲು ನಾವು ಯಾರು? ಆದರದು ವಿಭಜನೆಯಾಗಬೇಕಲ್ಲವೆ? 'ಗೋಲಗುಮ್ಮಟ'ದಲ್ಲಿ 'ಗುಮ್ಮಟ' ಎಂಬುದು ಹಿಂದುಸ್ತಾನಕ್ಕೆ ಸೇರತಕ್ಕುದೆಂಬುದಕ್ಕೆ ಸಂದೇಹವಿಲ್ಲ! ಅದಕ್ಕೆ ಸಂಸ್ಕೃತಿಯು ಆಧಾರವಿದೆ. (ಉದಾ : ಗೊಮ್ಮಟೇಶ್ವರ, ಗಾಳಿಗೋಪುರ ಇಂ. ಇಂ). ಆದ್ದರಿಂದ 'ಗೋಲ ಯಾನೆ ಬೋಲ' ಎಂಬ ವಿಭಾಗವು ಪಾಕಿಸ್ತಾನಕ್ಕೆ ಸೇರತಕ್ಕದ್ದಲ್ಲವೆ? ಕರ್ನಾಟಕದ

ಈ 'ಗೋಳ'ನ್ನು ಕರಾಚಿಗೆ ಕಳುಹಿಸುವ ವ್ಯವಸ್ಥೆಯಾಗುವವರೆಗೆ ಅಧಿಕಾರಾಂತರದ ದಿನವನ್ನು ಮುಂದೆ ಹಾಕಬೇಕೆಂದು ನಮ್ಮ ಯಾನೆ ನನ್ನ ಸೂಚನೆ.

ಬರಿಯ ಪಾಕಿಸ್ತಾನ ಮತ್ತು ತುಪಾಕಿಸ್ತಾನಗಳ ವಿಭಜನೆಯಿಂದ ಈ ಸ್ವಾತಂತ್ರ್ಯವಾದ ಬಗೆ ಹರಿಯದು ಎಂಬುದನ್ನು ಸಿದ್ಧಮಾಡಿ ತೋರಿಸುವ ಉದ್ದೇಶದಿಂದಲೆ ನಾನು ಇದೆಲ್ಲವನ್ನು ಬರೆಯುತ್ತಲಿದ್ದೇನೆ. ಎಷ್ಟೊಂದು ವರ್ಷಗಳ ಮೇಲೆ ದೊರಕಿದ ಸ್ವಾತಂತ್ರ್ಯ, ಎಂದಮೇಲೆ ಪೂರ್ತಿಯಾಗಿ ದೊರಕಬೇಕಲ್ಲವೆ ? ಭಾರತಕ್ಕೆ ಸ್ವಾತಂತ್ರ್ಯ ದೊರಕಿದ್ದು ಅಖಿಲಭಾರತ ಕಾಂಗ್ರೆಸಿನ ಪ್ರಯತ್ನದಿಂದ ; ಆದ್ದರಿಂದ, ಕರ್ನಾಟಕಕ್ಕೆ ಸ್ವಾತಂತ್ರ್ಯ ದೊರಕಬೇಕು ಕರ್ನಾಟಕ ಪ್ರಾಂತಿಕ ಕಾಂಗ್ರೆಸಿನಿಂದ. ಭಾರತದ ಸ್ವಾತಂತ್ರ್ಯ ಎಂದರೆ ಭಾರತದ ವಿಭಜನೆ. ಆದ್ದರಿಂದ, ಕರ್ನಾಟಕದ ಸ್ವಾತಂತ್ರ್ಯ ಎಂದರೆ ಕರ್ನಾಟಕದ ವಿಭಜನೆ ! ಎಷ್ಟೊಂದು ನೇರವಾಗಿದೆ ದಾರಿ ! ಎಷ್ಟೊಂದು ಸುಲಭವಾಗಿದೆ ಸಮಸ್ಯೆ ! ! ಎಷ್ಟೊಂದು ಚೊಕ್ಕವಾಗಿದೆ ಲೆಕ್ಕ ! ! !

ಈ ರೀತಿಯಾಗಿ, ವಾಚಕಮಹಾಶಯರೆ, ಸ್ವಾತಂತ್ರ್ಯದ ಲೆಕ್ಕವನ್ನು ಬಿಡಿಸಿ ಕರ್ನಾಟಕದ ಸ್ವಾತಂತ್ರ್ಯ ಎಂದರೆ ಕರ್ನಾಟಕದ ವಿಭಜನೆ ಎಂಬ ಉತ್ತರವನ್ನು ಹೊರಡಿಸಿದ್ದೇವೆ. ಇಲ್ಲಿಗೆ ಮುಗಿಯಿತು ನಮ್ಮ missionವು. ಇದನ್ನು ಕಾರ್ಯರೂಪದಲ್ಲಿ ತರುವ ಹೊಣೆಗಾರಿಕೆ ಅನುಭವವುಳ್ಳ ಕರ್ನಾಟಕದ ಕಾಂಗ್ರೆಸ ಹಿರಿಯರದು, ಪ್ರಾಂತಿಕ ಕಾಂಗ್ರೆಸ ಕಮಿಟಿಯ ಸಂಸ್ಥೆಯದು. ಈಗಾಗಲೆ ಅನೇಕ ತರದ ಚುನಾವಣೆಗಳಲ್ಲಿ ಮಾಡಿದ ಪ್ರಯೋಗಗಳಿಂದ ಇಂತಹ ಶಕ್ತಿ ಈ ಹಿರಿಯರಲ್ಲಿ, ಈ ಸಂಸ್ಥೆಯಲ್ಲಿ ಪೂರ್ಣವಾಗಿದೆ ಎಂದು ನಂಬೋಣ. ಒಂದು ವೇಳೆ ಇದುವರೆಗೆ ಪೂರ್ಣವಾಗಿದ್ದಿಲ್ಲವೆಂದರೆ ಅದನ್ನು ಹಾಗೆ ಮಾಡುವಂತೆ ಪರಮಾತ್ಮನಲ್ಲಿ ಪ್ರಾರ್ಥಿಸೋಣ.

ಓಂ. ಜಾತಿರದಃ ಜಾತಿರಿದಂ ಜಾತೇರ್ಜಾತಿರುದಚ್ಯತೇ ।
ಸ್ವಾತಂತ್ರ್ಯೇ ಜಾತಿಮಾದಾಯ ಪಾಕಿಸ್ತಾನೋವಶಿಷ್ಯತೇ ॥
ಓಂ. ಜಾವ್ ಅಂತಿರ್ ಜಾವ್ ಅಂತಿರ್ ಜಾತಿಃ ॥

—ಶ್ರೀರಂಗ.

—o—

ನಿನ್ನೆ ಅಂದರೆ 14ನೇ ತಾ॥ ಬೆಳಗ್ಗೆ 2,236 149 ಜನ ಕನ್ನಡಿಗರು ತಮ್ಮ 30ನೇ ವರ್ಷ ವಯಸ್ಸನ್ನು ದಾಟಿ, "ಯುವಜನ" ಎಂದು ಕರೆಸಿಕೊಳ್ಳುವ ಅಮೂಲ್ಯ ಹಕ್ಕನ್ನು ಅನ್ಯಾಯವಾಗಿ ಕಳೆದುಕೊಂಡರಂತೆ.

* * * *

ಸಂತೇಲಿ ಬಾಯಿ ಬಿಚ್ಚಿ :



“ ನಮ್ಮನೆ ‘ ಕಣಜ ’ ಈಗ ಖಾಲಿ, ಬಾಡಿಗೆಗೆ ಕೊಡೋಣವೇ ಎಂದರೆ ”—



# ಮದುವೆ

ರಾಗ—ಬಾಗೇಶ್ರಿ

ಮದುವೆಯಾದರೆ ಇಂದು ಬಲು ಕಷ್ಟವಯ್ಯ !
ಮದುವೆಯಾಗದೆ ಮನವು ನಿಲ್ಲದಯ್ಯ !

ದಿನಕೊಂದು ಕನ್ನೆಯನು ಕರೆದು ತರುತಿಹರು,
"ಕೈ ಹಿಡಿದು ಕಾಪಾಡು !" ಎನ್ನುತಿಹರು !
ಬೇಕಾದುದೆಲ್ಲವನು ಕೊಡುವರವರು,
ರೂಪಾಯಿ ಗಂಟುಗಳ ತೋರುತಿಹರು ||

ಕನ್ನೆಯರ ಮೊಗದಲ್ಲಿ ಮಿಂಚು ಮೆರೆಯುವುದು,
ಕಣ್ಣಿನಲಿ ಕಕ್ಕುಲತೆ ಕಂಡು ಅಡಗುವುದು ;
"ದಾಸಿ ನಾನಿಹೆ !" ಎಂದು ಕರೆದು ಹೇಳುವುದು—
ಆಸೆ ಮನ್ಮನದಲ್ಲಿ ಮೂಡಿ ಅಡಗುವುದಯ್ಯ ||

ಜೀವಜೀವಕ್ಕಾಗಿ ಹಾತೊರೆವ ಕಾಲವಿದು,
ಹೂವು ದುಂಬಿಯು ಸೇರಿ ಕಾಯಾಗಬಹುದು ;
ನಲುಮೆ ಒಲುಮೆಯು ಸೇರಿ ಸೊಗ ಬರಲು ಬಹುದು,
ಜೀವನದ ರಥವೇರಿ ಬದುಕ ಗೆಲಬಹುದು ||

ತುತ್ತ ತರುವಾಶಂಕೆ ಇಲ್ಲದೊಡೆ ಮನದಲ್ಲಿ
ಮದುವೆಯಾಗಲು ನನಗೆ ಸಾಧ್ಯವುಂಟು !
ದುಡಿವುದಕೆ ಮನಸುಂಟು, ತಲೆಯೊಳಗೆ ಮೆದುಳುಂಟು,
"ಕೆಲಸ ?" ಎಂದರೆ, "ನಿನ್ನ ಹುಟ್ಟು ಏನೆನ್ನುವರು !

—ಕೋಬ್ರಾವ್.

# ಗೂಂಡಗಲಿ

---

ಕ್ಯೂ ಬಲವಾಗಿತ್ತು. ಅಕಸ್ಮಾತ್ ಬಸ್ ಸಿಕ್ಕಿ, ಬಸ್ಸಿನಲ್ಲಿ ಒಂದು ಸೀಟೂ ಸಿಕ್ಕಿ, ಗೂಡು ಸೇರ್‍ಕೊಳ್ಳೊ ಛಾನ್ಸ್ ಇದ್ದರೆ ಮನೇಲಿ ಒಂದು ಶೀಷೆ ನೀಲ್ಗಿರಿ ಎಣ್ಣೆ, ಒಂದು ಮಣ ಸೌದೆಗೆ ವಕ್ರ ಬರೋ ಅಷ್ಟು ಜಖಂ ಆಗಿದ್ದುವು ಕ್ಯೂ ಯೊಳಗಿನ ಮೂಳೆ ಮಾಂಸಗಳು. ನಿಜ ವಾಗಿ ಕ್ಯೂನಲ್ಲಿದ್ದವರೆಲ್ಲಾ ತಾಳ್ಮೆಯಿಂದ ಬಸ್ಸಿಗೇ ಕಾದರೆ ಈಗಿನ ಬಸ್ಸುಗಳ ಏರ್ಪಾಡು ಪ್ರಕಾರ ಕೇವಲ ಮೂರೇ ದಿನದಲ್ಲಿ ಅವರೆಲ್ಲಾ ಮನೆ ಸೇರ್‍ಕೊ ಬಹುದಾಗಿತ್ತು.'

ಸಾಲದ್ದಕ್ಕೆ ನನ್ನ ಮುಂದಿನವ "ಕೇಶ ವರ್ಧಿನಿ" ಬೇರೆ ಲೇಪಿಸಿಕೊಂಡಿದ್ದ. ಹಿಂದಿನವನ ಹತ್ತಿರ ಒಂದು ಕೈಗೂಸು ನನ್ನ ತಲೆ ಹಿಂಭಾಗದಲ್ಲಿ ಅಳಿದುಳಿದಿದ್ದ ಕೇಶಶೇಷದಲ್ಲಿ ಆ ಕೂಸಿಗೆ ಒಂದು ತರಹ ಪ್ರಚಂಡ ವಿಶ್ವಾಸ ಉದ್ಭವಿಸಿ, 'ಅಯ್ಯೋ, ಇನ್ನೇನು ಒಂದು ಸೀಟು ಸಿಕ್ಕಿತು— ಉಸ್ಸ್........' ಅನ್ನೋ ಹೊತ್ತಿಗೆ ನನ್ನ ಶಿರಸ್ಸಿನ ಅಧೋಭಾಗದ ಅಲ್ಪ ಸ್ವಲ್ಪ ಬೆಳೆಯಲ್ಲಿ ಅರ್ಥವೇ ಇಲ್ಲದಂತೆ ಮಾಡಿತ್ತು. ನನ್ನ ಹಿಂದಿನ ಕ್ಯೂ ಜನರ ನೂಕು ಬಲದಿಂದಲೇ ಮುನ್ನುಗ್ಗಿ ಕಂಬಿ ಹಿಡಿದು, ಒಟ್ಟಿಗೆ ನುಗ್ಗಿದ ಐದು ಜನರ ಜತೆ ಒಳನುಗ್ಗಿ ಕುಕ್ಕರಿಸಿದೆ. ಕಂಡಕ್ಟರ್ ಮಹಾಶಯ ಎಂದಿನಂತೆ ಟಿಕೆಟ್‌ಗೆ ದುಡ್ಡು ಕೇಳಲು ಬಂದಾಗಲೇ, ಈ ಕಥೆ ಪ್ರಾರಂಭಿಸುತ್ತೆ! ಯಥಾ ಪ್ರಕಾರ.

" ಅರೇ ! ಇಷ್ಟುಬೇಗ ಏನಾಯ್ತು ಪರ್ಸು ?...........ಜೇಬು ಹಿಡ್ಕೊಂಡೇ ಇದ್ದೆನಲ್ಲಾ ?..... .. ಸರಿ ! ಹೋದರೆ ಹೋಗಲಿ, ಅದರಲ್ಲಿದ್ದಿದ್ದೆಷ್ಟು ಮಹಾ! ಇವತ್ತೆಲ್ಲಾ ಹದ್ಮೂರಾಣೆ ಚಿಲ್ರೆ— ಒಂದು ಏರ್‌ಕ್ರಾಫ್ಟ್ ಸರ್ಟಿಫಿಕೇಟು.... ....ಆದರೆ—ಅಯ್ಯೋ ಬಸ್ ಛಾರ್ಜಿಗೇನು ಮಾಡೋದು ? " ಅಂತ ಜೇಬುಗಳನ್ನೆಲ್ಲಾ ತಡಕಾಡೋ ಹೊತ್ತಿಗೆ ಕಂಡಕ್ಟ್ರು ಮುಂದೆ ಹೋದ. " ಅರ್ಧದಾರೀ ಹೋಗ್ಲಿ ಬಸ್ಸು ನೋಡೋಣ ! ಇಷ್ಟು ಕಷ್ಟಪಟ್ಟು ಹತ್ತಿ ಮತ್ಯಾಕಿಳಿಯೋದು ? ಫಸ್ಟ್‌ಕ್ಲಾಸ್ ಸೂಟು ಬೂಟು ಹಾಕ್ಕೊಂಡಿಲ್ಲವೇನು ? ಒಳ್ಳೇ ವೆಸ್ಟ್‌ಎಂಡ್ ವಾಚಿಲ್ಲವೇನು ? ........ ಅರರೇ ...ನನ್ನವಾಚೆಲ್ಲಿ ?.... ಅಯ್ಯೋ, ಅಷ್ಟು ಬೇಗ ಯಾವ ಪಾಪಿ ಹೊಡೆದ ? ....ಬಸ್ ಹತ್ತೋವಾಗ ಪಕ್ಕದಲ್ಲಿದ್ದ ಪೋಲಿಸ್ ಇನ್ಸ್ಪೆಕ್ಟರು ಬೇರೆ ಕೂಗಿಕೊಂಡರಲ್ಲವೇ....' ಗೂಂಡಾ, ಗೂಂಡಾ ಹಿಡೀರಿ ' ಅಂತ. ಅವರೂ ಬಸ್‌ನಲ್ಲೇ ಇದಾರಲ್ಲ ; ಕೇಳೋಣ "........

ಅಂತಂದುಕೊಳ್ಳೋದರೊಳಗೇ, ನನ್ನ ಜೊತೆ ಬಸ್ ಹತ್ತಿದ್ದ ಇನ್ಸ್ಪೆಕ್ಟರು ಹೇಳ್ತಾ ಇದ್ರು ಪಕ್ಕದವನಿಗೆ, "ಪಾಪ! ಯಾರದೋ ವಾಚ್ ಹೊಡೆದೇ ಬಿಟ್ಟ ಒಬ್ಬ ಗೂಂಡ. ಕಟ್‌ಥ್ರೋಟ್ ........ಫಸ್ಟ್‌ಕ್ಲಾಸ್ ವೆಸ್ಟೆಂಡು, ಬಂಗಾರದ ಚೈನು ಸಮೇತ ಬಲವಾಗಿ ಅವನ ಜುಟ್ಟು ಹಿಡಿದುಕೊಂಡು ಚೈನಿಗೆ ಕೈ ಹಾಕಿದೆ— ಬಿಟ್ಟೇನೆ ನಾನು ?.... ... [' ಸಥ್ಯ— ಸಿಕ್ಕಿತು ನನ್ನವಾಚು – ಸಾಯಿಬಾಬಾ ! 'ಂತ ' ಸ್ಟೈ'ಗರಿದೆ.] ... ...." ಆದರೆ ಅದು ಹೇಗೋ, ಯಾವ ಮಾಯದಲ್ಲೋ ಹೊಡ್ಕೊಂಡೇ ಹೋದ ನೋಡಿ....ಕಣ್ಣು ಹೊಡಿಯೋ ಅಷ್ಟರಲ್ಲಿ.......ಅವನ ಜುಟ್ಟಿನ ಮೂರು ಕೂದಲು ಮಾತ್ರ ನನ್ನ ಕೈನಲ್ಲಿತ್ತು.... ....ಬಲು ಕಿಲಾಡಿಗಳು ಬೆಂಗಳೂರಿನ ಗೂಂಡಾಗಳು

ಇದನ್ನು ಕೇಳಿದೊಡನೆಯೇ ನನ್ನ ನರಗಳ ಶಕ್ತಿ ಸೊನ್ನೆಗಿಳಿಯಿತು. ಮಾತು ಹೊರಡಲಿಲ್ಲ. ತುಟಿಗಳು ಬಿಳಿಚಿ ಅಂಟಿಕೊಂಡುವು. ಬಾಯಿ ನೀರಿಲ್ಲದ ಹಾಳು ಭಾವಿಯಾಯಿತು. ಇನ್ಸ್ಪೆಕ್ಟರು ಮುಂದುವರಿದರು.

" ಪಾಪ, ಎಷ್ಟು ಹೊತ್ತಿನಿಂದ ಬಸ್ಸಿಗೆ ಕಾದಿದ್ದನೋ ಬ್ರಾಂಹಣ! ಗಂಟೆಗಟ್ಲೆ ಕಾದು, ಗಡಿಯಾರಾನೂ ಕಳ್ಕೊಂಡು ಗೂಂಡಾ ಹಿಂದೆ ಓಡಿದಾಂತ ಕಾಣುತ್ತೆ. ಹೇಗಾದ್ರೂ ಮಾಡಿ ಈ ಜೇಬು ಕಳ್ಳರನ್ನ ಬಡಿದು ಮೂಲೆಗೆ ಹಾಕಬೇಕು. ನಮ್ಮ ಕಡೆ ಪೋಲೀಸಿನವರಿಗೆ ಈ ಜೇಬು ಕಳ್ಳತನದಲ್ಲಿ ಮಾಹಿತಿ ಸಾಲದು........" ಅವರ ಪಕ್ಕದಲ್ಲಿದ್ದವರು ತಲೆಯಲ್ಲಾಡಿಸಿದರು.

ಇನ್ಸ್ಪೆಕ್ಟರು ನನ್ನಮೇಲೆ ತೋರಿಸಿದ ಕನಿಕರ, ಈವರೆಗೆ ನನ್ನಲ್ಲಿ ಮನೆ ಮಾಡಿದ್ದ ಪೋಲೀಸ್‌ಗಳ ಮೇಲಿನ ದ್ವೇಷವನ್ನೆಲ್ಲಾ ದೊಡ್ಡೋರಿ ನೀರಿನಂತೆ ಕೊಚ್ಚಿಕೊಂಡು ಹೋಯಿತು. ಅತನಲ್ಲಿ ನನಗೆ ಪೂಜ್ಯಭಾವನೆ ಮೊಳೆಯಲಾರಂಭಿಸಿತು.

ವಿಧಿಯಿಲ್ಲದೆ, ಬಸ್‌ಸ್ಟಾಪೊಂದರ ಹತ್ತಿರ ದೇವರು ಕಳಿಸಿದ ದೂತನೋ ಎಂಬಂತೆ ನಿಂತಿದ್ದ ದೋಸ್ತಿಯೊಬ್ಬನಿಂದ ಎಂಟಾಣೆ ಸಾಲಮಾಡಿ ಟಿಕೆಟ್ ತಗೊಂಡೆ. ಎರಡು ಕಡೆ ಇಳಿದು ಬಸ್ ಬದ್ಲಾಯಿಸಿ, ಮಲ್ಲೇಶ್ವರದ ಗಾಡಿ ಹಿಡಿಯೋ ಹೊತ್ತಿಗೆ ಮುಖದಲ್ಲಿ ಕ್ಷಯ ರೋಗಿಯ ಕಳೆ ಕುಣಿಯುತ್ತಿತ್ತು. ಪಾಪ, ಇನ್ಸ್ಪೆಕ್ಟರೂ ಕೂಡ ಅದೇ ಬಸ್ಸುಗಳಲ್ಲೇ ಮಲ್ಲೇಶ್ವರಕ್ಕೆ ಬಂದರು. ನಾನೇ ವಾಚ್‌ಕಳೆದುಕೊಂಡ ನಿರ್ಭಾಗ್ಯ ಭಾರತೀಯ ಅಂತ ತಿಳಿದಿದ್ದರೆ ಅವರು ಕಣ್ಣೀರು ತಂದುಕೊಳ್ಳುತ್ತಿದ್ದರೋ ಏನೋ ?

ಇನ್ನೇನು ನಮ್ಮನೆ ಕ್ರಾಸ್ ಹತ್ತಿರ ಇಳಿಯಬೇಕು, ಅಷ್ಟುಹೊತ್ತಿಗೆ ಸರಿಯಾಗಿ ನಾನು ಮೂರ್ಛೆ ಹೋದದ್ದು ಅಂತ, ನಂತರ ತಿಳಿಯಿತು, ಮನೆಯಲ್ಲಿ.

ನಮ್ಮನೇ ಕ್ರಾಸು ಹತ್ತಿರ ಬರುತ್ತಿದ್ದ ಜ್ಞಾಪಕ, ಕಂಡಕ್ಟರು 'ಬಸ್‌ಸ್ಟಾಪ್-ಹೋಲ್ಡಾನ್' ಅಂದ ಜ್ಞಾಪಕ; ಇನ್ಸ್ಪೆಕ್ಟರು ಅವರ ಪಕ್ಕದ ಪ್ರಾಣಿಗೆ, ತಮ್ಮ ಜೇಬಿನಿಂದ, ಅತ್ತಿತ್ತ ನೋಡಿ, 'ನನ್ನ' ವೆಸ್ಟೆಂಡ್ ವಾಚು—ಬಂಗಾರದ ಚೈನು ತೆಗೆದು ತೋರಿಸಿ, "ನೋಡಿ ಸ್ವಾಮಿಾ, ನಂಬ್ತೀರಾ ಒಟ್ಟುಮುನ್ನೂರು ರೂಪಾಯಿಯಾಂದ್ರೆ? ಬರೋ ತಿಂಗಳು ನನ್ನ ಮಗಳ ಮದುವೆ ಮಾಡ್ಬೇಕೂಂತಿದೇನೆ ಅಂದೆನಲ್ಲ!........' ಅಳಿಯನಿಗೇಂತ........ತಗೊಂಡೆ. ಈಗಿನ ಕಾಲದ ಹುಡುಗರು ಕೇಳೋ ಸಾಮಾನಿನಲ್ಲಿ ಒಂದು ತೆಕ್ಕೊಟ್ರೆ ನಮ್ಮಂಥೋರು ಮೂರು ವರ್ಷ ಸುಧಾರಿಸ್ಕೋಬೇಕು. ಒಟ್ಟಿನಲ್ಲಿ ಕಾಲ ಕೆಟ್ಹೋಯ್ತು ಸ್ವಾಮಿ........" ಅಂತಂದದ್ದು ಜ್ಞಾಪಕ.

—ಟೀಯಸ್ಸಾರ್ರಾವ್.

---



# ಆಗಸ್ಟ್ ಹದಿನೈದರಂದು

---

"ಹುರ್ರೇ........ಆಗಸ್ಟ್ ೧೫ ರಜಾ—ಅಂತಿಂಥಾ ರಜವಲ್ಲ. ಸ್ವಾತಂತ್ರ್ಯ ರಜ! ಮಜ!........ಈರುಳ್ಳಿ ಹುಳಿ ಸಂಡಿಗೆ ಹಪ್ಪಳ ಗಸಗಸೆ ಪಾಯಸ, ಎಲೆ ತುದಿಗೆ ಸೌತೇಕಾಯಿ ಕೋಸುಂಬ್ರಿ – ಮೊಸರು ಹೆಪ್ಪು? ಇಲ್ಲವೆ ಬೇಡ, ತಿಳಿ ಮಜ್ಜಿಗೆ, ಹುಳಿ ತೊವ್ವೆ, ಹುರ್ರೇ! ಹುರ್ರೆ!!" ಎಂದುಕೊಳ್ಳುತ್ತಾ, ಚಿಂತಾಮಣಿ ರಾಯರು ಸ್ವಾತಂತ್ರ್ಯ ದಿನಾಚರಣೆಯ ಬಗ್ಗೆ "ಮನೆಯಲ್ಲಿ ಮಾಡಬೇಕಾದ ಹಬ್ಬದ ಅಡಿಗೆ ಏರ್ಪಾಟು ಮಾಡಲು ಆಫೀಸು ಬಿಟ್ಟವರು ಒಳ್ಳೆ ಊದುಕಡ್ಡಿ – ವಿಳ್ಳೆದೆಲೆ ರಸಬಾಳೆ ದೇವರ ನೈವಿದ್ಯಕ್ಕೆ ಸುಗಂಧರಾಜಹೂವಿನ ಐದು ಕುಚ್ಚುಗಳು, ಬಾಳೆ ಎಲೆ ಸುರುಳಿ, ಸ್ವಾತಂತ್ರ್ಯ ಬಾವುಟ ಹಾಗೂ ಊಟದ ಸಾಮಗ್ರಿಗಳೊಡಗೂಡಿ ಮನೆಯ ಕಡೆ ಬಂದರು.

ಸಂಬಳ ಹೆಚ್ಚೀತು – ಒಂದು ಜೊತೆ ಪಂಚೆ ಸಿಕ್ಕೀತು, ಕಷ್ಟವ್ಯಸನ ಪರಿ ಹರಿದೀತು, ಇದ್ದಲು ಮೂಟೆ ದೊರೆತೀತು ಆಫೀಸರ ದರ್ಪ– ತಮ್ಮ ಹಲ್ಲು ಗಿರಿಯು ವಿಕೆ – ನ್ಯಾಯವಾದಾವು. ಜುಬ್ಬ ಗಾಂಧಿ ಟೋಪಿಯೊಡನೆ ಆಫೀಸಿಗೆ ಹೋಗ ಬೇಕೆಂಬ ಆಸೆ ನೆರವೇರೀತು.

ಇಷ್ಟೆಲ್ಲಾ ಸವಿಗನಸುಗಳು ನನಸಾಗುವ ಸಂಭವವಿದ್ದರೂ, ಚಿಂತಾಮಣಿ ರಾಯರು ಚಿಂತಾಕ್ರಾಂತರಾಗಿ ಕಾಲೆಳೆಯುತ್ತಿದ್ದುದು ನೋಡಿದರೆ, ಅವರು ಆಗಸ್ಟ್ ಹದಿನೈದರ ಹಬ್ಬ ಆನಂದದಿಂದ ಅನುಭವಿಸಲಾರರೆಂದು ಅವರನ್ನು ಸೂಕ್ಷ್ಮವಾಗಿ ಪರೀಕ್ಷಿಸಿದವರು ಹೇಳಬಹುದಾಗಿತ್ತು.

ಮನೆ ಮುಂದೆ ಸಾರಿಸಿ ಗುಡಿಸಿ ಕಾರಣೆ ಎಳೆದಿದ್ದರು. ಬಾಗಿಲಿಗೆ ಮಾವಿನ ಚಿಗುರಿನ ತೋರಣ ಶೋಭಾಯಮಾನವಾಗಿ ಕಂಡಿತು. ಕೇವಲ ಕೆಲವೇ ದಿನಗಳ ಕೆಳಗೆ ಮನೆಯ ಮಾಲೀಕರು ದಯೆತೋರಿ ಸುಣ್ಣ ಬಳಿಸಿದ್ದರಿಂದ ಮನೆಯ ಸೌಂದರ್ಯ ಇಮ್ಮಡಿಸಿತ್ತು. ಆದರೂ, ಉಸ್ಸಪ್ಪ ಎಂದು ತಲೆಯಮೇಲಿನ ಜರಿ ಪೇಟ ಮೇಜಿನಮೇಲೆ ಇಟ್ಟು ಪಕ್ಕದ ಕುರ್ಚಿಯಮೇಲೆ ಕುಳಿತರು.

"ನಾಳೆ ಹಬ್ಬದಡಿಗೆ ಸಾಮಾನೆಲ್ಲಾ ತಂದ್ರಾಂದ್ರೇ?" ಎಂಬ ಕೂಗು ಅಡಿಗೆ ಮನೆಯಿಂದಲೇ ಹಾರಿ ಬಂತು. ತಕ್ಷಣವೇ "ಹೂಂ-" ಎಂದು ಉತ್ತರ ಹೋಯಿತು. ನಸುನಗುತ್ತಾ ಕಾಫಿ ಲೋಟಾ ಹಿಡಿದು ಬಂದ ತಮ್ಮ ಅರ್ಧಾಂಗಿ ಯನ್ನು ಕಣ್ತುಂಬ ನೋಡಿ ಹಿಗ್ಗಿದರು. ನಿಜಸ್ಥಿತಿಗೆ ಬಂದರೆ ರಾಯರು ಮೀನಾಕ್ಷಮ್ಮ

ನವರಿಗೆ ಮಾಲೆ ಹಾಕಿದಂದಿನಿಂದಲೇ ಅವರ ಕೈಗೆ ಮೂಗುದಾರ ಕೊಟ್ಟು ಎತ್ತ ಎಳೆದರೆ ಅತ್ತ ತಿರುಗುವ ಪ್ರಾಣಿಯಾಗಿಬಿಟ್ಟಿದ್ದರು. ಅದೇನು ಅವರ ಪ್ರಾರಬ್ಧವೋ, ಇಲ್ಲ– ಜಾತಕವೇ ಹಾಗೆಯೋ, ಇಲ್ಲ ಅವರ ಸ್ವಭಾವವೇ ಮಿದುವೋ, ಆ ಪರಾತ್ಪರ ಸ್ವರೂಪನೇ ಬಲ್ಲ. ಗಂಡಹೆಂಡಿರು ಬಹು ಅನ್ಯೋನ್ಯ, ಬಹು ಪ್ರೀತಿ ! ಆದರೂ ಕೈಹಿಡಿದಾಕೆಯೆದುರಿಗೆ ಚಿಂತಾಮಣಿ ರಾಯರು ಮರಿ ನಾಯಿ. ಪ್ರಸ್ತುತ, ನಾಳಿನ ಹಬ್ಬದ ಅಡಿಗೆಯಲ್ಲಿ ತಾನು ತಂದ ತರ್ಕಾರಿಯಲ್ಲಿ ತನ್ನ ಪ್ರಿಯ ವಸ್ತುಗಳಾದ ಈರುಳ್ಳಿ ಹುಳಿ – ಗಸಗಸೆ ಪಾಯಸಗಳನ್ನು ಮಾಡದೆ ಎಲ್ಲಿ ಅವಳ ಪ್ರೀತಿಯ ಪದಾರ್ಥವಾದ ಈರುಳ್ಳಿ ಮೊಸರು ಬಜ್ಜಿ, ಸೌತೆಕಾಯಿ ಮಜ್ಜಿಗೆ ಹುಳಿ ಮಾಡಿಬಿಡುವಳೋ ಎಂದು ಪರಿತಪಿಸುತ್ತಿದ್ದರು. ಅರ್ಧಾಂಗಿ ನಸುನಗುತ್ತಾ ಸಂತೋಷದಲ್ಲಿರುವದು ಇದೇ ತಕ್ಕ ಸಮಯವೆಂದ‍........"...........ಲೇ ನಾಳೆ ಏನಡಿಗೆ ಮಾಡ್ತೀಯ . ....?" ಎಂದು ಕೇಳೇ ಬಿಟ್ಟರು. ಆ ಚಿಕ್ಕ ಕಣ್ಣುಗಳಲ್ಲಿ ವೈಯ್ಯಾರ ಬೀರಿ, "........ಸೌತೆಕಾಯಿ ಮಜ್ಜಿಗೇ ಹುಳಿ ...—ಈರುಳ್ಳಿ ಮೊಸರು ಬಜ್ಜಿ ....... ಹಾಲ್ಬೀರು....ಚಿತ್ರಾನ್ನ....ಹೆಸರು ಬೇಳೆ ಕೋಸುಂಬ್ರಿ" ಎಂದು ಹೇಳಿದಳು

ಮನೆಯಲ್ಲಿ ತಮಗೆ ಇಲ್ಲದ ಸ್ವಾತಂತ್ರ್ಯ ದೇಶಕ್ಕೆ ಬಂದರೆಷ್ಟು ಹೋದರೆಷ್ಟು? "ದೇವರೇ—ಇಂಥಾ ಸ್ವಾತಂತ್ರ್ಯ ದಿನದಲ್ಲಿ ಇಡೀ ದೇಶವೇ ಆನಂದದಿಂದ ಉಂಡು ತೇಗಿ ಮೆರೆಯುತ್ತಿದೆ .. ....ನನಗೆ ಈರುಳ್ಳಿ ಹುಳಿ ಇಲ್ಲವಾಯಿತೇ "ಎಂದು ರಾಯರು ಮುಮ್ಮಲ ಮರುಗಿದರು. ಮುಂದಿನ ಜನ್ಮದಲ್ಲಾದರೂ ಹೆಂಡತಿಯನ್ನು ಹೆದರಿಸುವ ಶಕ್ತಿ ಕೊಡಬೇಕೆಂದು ಆಕಾಶವನ್ನು ಬೇಡಿದರು.

ಬಾಗಿಲು ತಟ್ಟಿದ ಶಬ್ದವಾಯಿತು. ತೆಗೆದರು ಮೀನಾಕ್ಷಮ್ಮನವರು ಹೊಸ ಧರ್ಮಾವರದ ಸೀರೆಯುಟ್ಟು ಕುಚ್ಚು ಸುಗಂಧರಾಜ ಹೂವು ಮುಡಿದು ಶೃಂಗಾರವಾಗಿ ನಿಂತಿದ್ದರು. ರಾಯರು ಚಿಂತಾಕ್ರಾಂತರಾಗಿದ್ದುದು ಆಕೆಗೆ ಅರ್ಥವಾಗಲಿಲ್ಲ

"ಇದೇನೂಂದ್ರೆ, ನಾಳೆ ಸ್ವಾತಂತ್ರ್ಯದಿನ....ನಗನಗತಾ ಇರೋದು ಬಿಟ್ಟು ಇದೇನೂಂದ್ರೆ ?" ಎಂದು ಒದರಿದಳು. ಆದರೆ ಆತನ ಚಿಂತೆಗೆ ಕಾರಣ ಈಕೆಗೆ ಹೇಗೆ ಗೊತ್ತು........? ಆತನಾದರೂ ಹೇಳಬಹುದು, ಆದರೆ ಧೈರ್ಯ ಯಾರ ಮನೆಯಿಂದ ಕದ್ದು ತರುವುದು ? ಆತನಿಗೆ ತಡೆಯದಾಗದೆ.... . ಗದ್ಗದಸ್ವರದಿಂದ ನಾಳೆ .... ...ಏನಡಿಗೆ ..." ಎಂದು ಮತ್ತೆ ಕೇಳಿದ. ಆಕೆಗೆ ಈತನ ದುಃಖದ ಮೂಲ ತಿಳಿಯಿತೋ, ಇಲ್ಲ ಅವಳ ಮನಸ್ಸೇ ಬದಲಾಯಿಸಿತೋ.........ಇಲ್ಲಾ ಆತನ ಅದೃಷ್ಟ ಅಂದಿನಿಂದ ಖುಲಾಯಿಸಿತೋ.........ಇಲ್ಲಾ ಸ್ವಾತಂತ್ರ್ಯದ ಪ್ರಭಾವವೋ ಅಂತೂ "ಹೋಗಲಿ ಬಿಡಿ,....ನಾಳೆ, ಈರುಳ್ಳಿ ಹುಳಿ .... .. ಹಪ್ಪಳ ಸಂಡಿಗೆ ಗೆಸಗಸೆ" ಎಂದು ಹೇಳಿದ್ದು ಅವರಿಗೆ ಸ್ಪಷ್ಟವಾಗಿ ಕೇಳಿಸಿತು.

" ಹುರ್ರ್ರ್ರೇ.......ಹುರ್ರ್ರ್ರೇ " ಎಂದು ಮನದಲ್ಲೇ ಕೂಗಿ ಮತ್ತೊಮ್ಮೆ ಕೇಳಿ....ತಾನು ಈರುಳ್ಳಿ ಹುಳಿ ಎಂದು ಕೇಳಿದ್ದು ನಿಜವೆಂದು ಧೃಡಪಡಿಸಿಕೊಂಡರು. ನಾಳೆ ಮದುವೆ ಸೂಟು ಹಾಕಿಕೊಳ್ಳುವಂತೆ ಅಮ್ಮನವರ ಆಜ್ಞೆಯಾಯಿತು. ಈರುಳ್ಳಿ ಹುಮ್ಮಸ್ಸಿನಲ್ಲಿ ತಕ್ಷಣ ರಾಯರು ಹಾಕ್ಕೊಂಡೇಬಿಟ್ಟರು.

" ನೋಡೀಂದ್ರೆ....ನಾವು ನಾಳೆನಿಂದ ಸ್ವತಂತ್ರರಾಗ್ತೀವಿ. ಅದರ ನೆನಪಿಗಾಗಿ ಒಂದು ಒಳ್ಳೆ ಫೋಟೊ ತೆಗೆಸಿಕೊಳ್ಳೋಣಾಂದ್ರೆ " ಎಂಬ ಆಜ್ಞೆ.

" ಆಗಲಿ ಮೀನೂ, ಹಾಗೇ ಆಗಲಿ – ಹೇಗೆ ತೆಗೆಸೋಣ......." ಎಂದು ಚಿಂತಾಮಣಿರಾಯರೆಂದರು

" ಸದಾ ಈ ಸುದಿನ ಜ್ಞಾಪಕ ಬರ್ತಿರ್ಬೇಕು ನೋಡಿ.... ...ನಾನು ಕೂತ್ಕೊಂಡಿರಬೇಕು ; ನೀವು ನನ್ನ ಪಕ್ಕದಲ್ಲಿ ತ್ರಿವರ್ಣ ಬಾವುಟ ಹಿಡಿದು ನಿಂತಿರಬೇಕು ; ಹಾಗೆ ತೆಗೆಸೋಣ " ಎಂದಳು ಮೀನಾಕ್ಷಮ್ಮ.

ಈ ಮಾತು ಕೇಳಿ ಚಿಂತಾಮಣಿರಾಯರಿಗೆ ಬಹು ವ್ಯಥೆಯಾಯಿತು. ಸ್ವಾತಂತ್ರ್ಯ ದಿನದಲ್ಲೂ ತಾವು ಗುಲಾಮನಂತೆ ಹಿಂದೆ ನಿಂತೇ ಇರಬೇಕೆ ಎನಿಸಿತು. ದುಃಖ ಮರುಕಳಿಸಿತು. ಆದರೆ ಈಗ ಏನಾದರೂ ಮಾತಾಡಿದರೆ ಈರುಳ್ಳಿ ಹುಳಿಗೆ ಎಲ್ಲಿ ಸೊನ್ನೆ ಬಿದ್ದುಬಿಡುತ್ತೋ ಎಂಬ ಭಯ !

" ಫೋಟೋದೊಳಗೂ ನಾನು ಕೂತ್ಕೊಬಾರದೇನೇ ? " ಎಂದರು. ಮೀನಾಕ್ಷಮ್ಮನವರ ಮನ ಕರಗಿತು ಇಬ್ಬರೂ ಕೈಯ್ಯಲ್ಲಿ ಕೈಹಾಕಿಕೊಂಡು ಸ್ಟುಡಿಯೋಕ್ಕೆ ಹೊರಟರು. ಶ್ರೀರಾಮರಕ್ಷೆ—

— ದಾಶರಥಿ ದೀಕ್ಷಿತ್.



# ಹೆಣ್ಣುಹೆತ್ತವರು*-ಇವರಪಾಡು

---

ಹೆಣ್ಣು ಹೆತ್ತವರ ಪಾಡಿನ ವಿಷಯ ನಿಮಗೆ ಅನುಭವಕ್ಕೆ ಬಂದಿದುದನ್ನು ಒಂದು ಹದಿನೈದು ನಿಮಿಷದಲ್ಲಿ ಹೇಳುತ್ತೀರಾ ಎಂದು ಕರೆ ಬಂದಾಗ ಸಂತೋಷ ವಾಗಿ ಒಪ್ಪಿಕೊಂಡೆ. ಯಾಕೆಂದರೆ, ಹೆಣ್ಣುಹೆತ್ತವರ " ಸಂಬಂಧ " ನಾನು ಮಾಡಿ ದ್ದೇನೆ, ನಾನೂ ಸಾಲಾಗಿ ಹೆಣ್ಣು ಹೆತ್ತಿದ್ದೇನೆ. ಈ ಎರಡು ಜೀವನದ, ನಡೆದ ದೃಶ್ಯಗಳನ್ನು ನಿಮ್ಮ ಕಿವಿಗೆ ಹಾಕಿದರೆ, ಇವರ ಪಾಡು ಹೇಗಿತ್ತು, ಹೇಗಾಗಿದೆ ಎನ್ನುವುದು ನಿಮಗೇ ತಿಳಿಯುತ್ತೆ.

ಆಗ, ಯುದ್ಧ ಇನ್ನೂ ಸುದ್ದಿಯಾಗಿದ್ದ, ಕಾಲ. ೧೯೩೭—ನಾನೂ, ವರಸೆ ಯಾಗಿ ಮೂರು ಹೆಣ್ಣುಮಕ್ಕಳು, ಹೆಂಡತಿ, ಒಟ್ಟು ಒಂದುರೀತಿಯಾಗಿ ಹೆಣ್ಣುಂ ಸಾರ ಮಾಡಿಕೊಂಡಿದ್ದ ಕಾಲ. ಒಂದು ದಿನ ಬೆಳಗ್ಗೆ ಮಕ್ಕಳೆಲ್ಲಾ, ಪಕ್ಕದ ಮನೆಗೆ ಪಾಠಕ್ಕೆ ಅಂತ ಗಜ್ಜುಗ ತೆಗೆದುಕೊಂಡು ಹೋಗಿದ್ದರು. ಹೆಂಡತಿ ಅಡಿಗೆ ಮನೇಲಿ ಕಸೂತಿ ಹಾಕ್ತಾ ಕೂತಿದ್ದಳು. ನಾನು ಕೊಠಡಿಯಲ್ಲಿ ಪುಸ್ತಕ ಹಿಡಿದುಕೊಂಡು, ನಮ್ಮ 'ಫೀ ಫೀ'ಯನ್ನೆ ಜ್ಞಾಪಿಸಿಕೊಳ್ಳುತ್ತಿದ್ದೆ.

'ಫೀಫೀ' ಯಾರು ಎಂದು ನೀವು ಕೇಳಬಹುದು. ಫೀಫೀ ನಮ್ಮನೆಯವರೆಲ್ಲ ರಿಗೂ, ಪ್ರೀತಿಯಾಗಿದ್ದ ಮುದ್ದು ನಾಯಿ. ಸುಮಾರಾಗಿ ಬೆಳೆದ ನಾಯಿ–ಸಂಸಾರ ಅಂದಮೇಲೆ ಇದ್ದೇ ಇರುತ್ತಲ್ಲ !– ಬೆಳಗಾದರೆ ಗಂಡ ಹೆಂಡಿರ ಧನಸ್ತಾಪ. ಈ ಧನಸ್ತಾಪ ವಿಪರೀತಕ್ಕಿಟ್ಟುಕೊಂಡು ಮನಸ್ತಾಪದ ಮಟ್ಟಕ್ಕೂ ಏರುತ್ತಲ್ಲ ! ಅಂತಹ ಎಷ್ಟೋವೇಳೆಗಳಲ್ಲಿ ಈ ಫೀ ಫಿ ನಮ್ಮ ನಮ್ಮ ಜಗಳವನ್ನು ಪರಿಹರಿಸಿದೆ. ನನ್ನ ಚಪ್ಪಲಿ ಕಚ್ಚಿಕೊಂಡು ಹೋಗಿ ನನ್ನ ಹೆಂಡತಿ ಮುಂದೆ ಬಿಸಾಕುವುದು. ನಾನು ಚಪ್ಪಲಿ ಹುಡುಕಿಕೊಂಡು ಅಲ್ಲಿಗೆ ಹೋಗಿ, ' ನೋಡಿದೆಯಾ, ಈ ಹಾಳು ನಾಯಿ ನನ್ನ ಚಪ್ಪಲಿ ಇಲ್ಲಿಗೆ ತಂದಿದೆ ' ಎಂದು ಮಾತನಾಡಲು ಶುರುಮಾಡಿ, ಇಬ್ಬರೂ ಸೇರಿ ಅದನ್ನ ಬಯ್ಯುವುದಕ್ಕೆ ಮೊದಲ್ಮಾಡಿ, ನಾವು ನಾವು ನಮ್ಮ ನಮ್ಮ ಜಗಳ

---

* ಮದರಾಸ್ ಅಖಿಲಭಾರತ ಬಾನುಲಿಯ ಕೃಪೆಯಿಂದ.

ಮರೆಯುವುದು – ಇಲ್ಲದಿದ್ದರೆ ಅವಳ ರಂಗು ರಂಗಿನ ಚಪ್ಪಲಿಯನ್ನು ನಾನು ಒಬ್ಬನೇ 'ವಾಕಿಂಗ್' ಹೊರಡುವ ಹೊತ್ತಿಗೆ ನನ್ನ ಎದುರಿಗೆ ಹಾಕುವುದ, 'ಹೆಂಡತಿಯನ್ನೂ ಕರೆದುಕೊಂಡು' ಹೋಗು ಎಂದು ಸೂಚಿಸಲೋ ಎಂಬಂತೆ. ಆಕೆ, ಕಿಟಕಿವದನೆ, 'ನೋಡಿ ಆ ನಾಯಿಗೆಷ್ಟು ಬುದ್ಧಿ ಇದೆ?' ಎಂದು ಶುರು ಮಾಡುವುದು – ಇತ್ಯಾದಿ— ಇದೆಲ್ಲಾ ನಿಮಗೆ, ಸಂಸಾರಿಕರಾದ ನಿಮಗೆ, ಹೇಳಬೇಕೆ ?



ಮುಖ್ಯ ಆ ಮುದ್ದು ಹೆಣ್ಣು ನಾಯಿ ಮನೆಯಲ್ಲೆಲ್ಲಾ ಸ್ತ್ರೀಎಲ್ಲರಿಗೂ ಬೇಕಾದ ವಸ್ತುವಾಗಿತ್ತು. ಅದಕ್ಕೆ ಇದ್ದಕ್ಕಿದ್ದಂತೆ ಏನೋ ಆಯಿತು; ಉಪವಾಸ ಮಾಡಲಾರಂಭಿಸಿತು. ಪಶುವೈದ್ಯನಿಗೆ ಹೇಳಿ ಕಳಿಸಿದೆ. ಆತ ಅದಕ್ಕೆ ಪ್ರಯಾಸಪಟ್ಟು ಎಣ್ಣೆ ಕುಡಿಸಿದ. ಆಮೇಲೆ ಅದು ನೀರು ಕುಡಿಯುವುದನ್ನೂ ಬಿಟ್ಟಿತು. ನಿಟ್ಟ ನಿಲಾರ ಮಾಡಲಾರಂಭಿಸಿತು. ಒಂದು ಸಂಜೆ ನನ್ನ ಮುಖವನ್ನೇ ನೋಡುತ್ತಾ ಬಾಲ ಅಲ್ಲಾಡಿಸುವುದನ್ನು ನಿಲ್ಲಿಸಿತು ಅಯ್ಯೋ ಎಂದುಕೊಂಡು ಗಂಟಲಿಗೆ ಒತ್ತಿಕೊಂಡು ಬಂದ ಏನನ್ನೋ ಕಷ್ಟಪಟ್ಟು ನುಂಗಿಕೊಂಡು, ಮನೆಯೊಳಕ್ಕೆ ಬಂದೆ.

ಇದೆಲ್ಲಾ ಆಗಿ ಇನ್ನೂ ಒಂದು ವಾರ ಆಗಿತ್ತಿಲ್ಲ. ಅದರ ಪ್ರೀತಿ, ಅದರ ಬಾಲದ ಭರತನಾಟ್ಯ, ಕಣ್ಣಿನ ಹೆಂಗರುಳು ನೋಟ, ನನ್ನ ಮೇಲಿದ್ದ ಅಪಾರ ವಾತ್ಸಲ್ಯ, ನನಗಿಂತಲೂ ಹೆಚ್ಚಾಗಿ ನನ್ನ ಚಪ್ಪಲಿ ಮೇಲಿದ್ದ ಅದರ ಮಮತೆ, ಇದೆಲ್ಲವನ್ನೂ ಜ್ಞಾಪಿಸಿಕೊಳ್ಳುತ್ತಾ ಪುಸ್ತಕ ಹಿಡಿದುಕೊಂಡು, ಕೊಠಡಿಯಲ್ಲಿ ಒರಗಿದ್ದೆ.—

ಯಾರೋ ಹೊರಗಿನಿಂದ "ರಾಯರೇ! ರಾಯರೇ!" ಎಂದು ಮೆಲ್ಲನೆ ಧ್ವನಿಯಲ್ಲಿ ಕೂಗಿದರು. ಇದೇನಿದು ? ಬಡ ಕಛೇರಿ, ಬಡ ನೌಕರ ನಾನು. ನನಗೂ ಇಷ್ಟು ಮರ್ಯಾದೆ ಕೊಟ್ಟು ಕೂಗುವವರು ಯಾರು, ಎಂದುಕೊಂಡು ಹೊರಗೆ ಹೋಗಿ ನೋಡಿದರೆ, ಒಬ್ಬ ಆಗಂತುಕ. ಸುಮಾರು ೫೦ ವರ್ಷ ವಯಸ್ಸಾಗಿದ್ದಿರಬೇಕು. ಹಾಸಿಗೆ ಕೆಳಗಿಟ್ಟು ಇಸ್ತ್ರಿಮಾಡಿದ ರುಮಾಲು ಸುತ್ತಿದ್ದಾನೆ. ಅಲ್ಪ ಸ್ವಲ್ಪ ಗಡ್ಡ, ಬೆಳಿಗ್ಗೇನೆ ಗಂಧಾಕ್ಷತೆ ಇಟ್ಟುಕೊಂಡಿದ್ದಾನೆ. ಮಾಸಲು ಕಪ್ಪು ನಿಲುವಂಗಿ, ಪಂಚೆಕಚ್ಚೆಹಾಕಿ ಉಟ್ಟಿದ್ದ ಮಗ್ಗಲು ಹಾಸಿಗೆ. ಉಸಿರು ನಿಂತ ಚಪ್ಪಲಿ. ಉಸಿರು ನಿಲ್ಲುತ್ತಿರುವ ಧ್ವನಿಯಲ್ಲೇ ನನ್ನ ಕೂಗಿದ್ದು.

" ಏನು ಸ್ವಾಮಿ! ಏನು ಬೇಕಾಗಿತ್ತು ?" ಎಂದೆ. ' ನಿಮ್ಮ ಹತ್ತಿರಾನೇ ಮಾತನಾಡಲು ಬಂದೆ ' ಎಂದ

ಬನ್ನಿ, ಎಂದು ಒಳಗೆ ಕರೆದುಕೊಂಡು ಹೋಗಿ ಕೊಠಡಿಯಲ್ಲಿ ಕೂರಿಸಿದೆ. ' ಏನು ಸಮಾಚಾರ ?' ಎಂದೆ. ಆತ ಹೇಳಲಾರಂಭಿಸಿದ—ಸಂಕೋಚ ಸಂಕೋಚವಾಗಿಯೇ ಶುರುಮಾಡಿ, ಅಕ್ಷರಗಳನ್ನು ನುಂಗುತ್ತಾ, ಉಗುಳನ್ನೂ ಚೆಲ್ಲುತ್ತಾ ಮಾತಾಡಲಾರಂಭಿಸಿದ. ' ರಾಯರೇ- ನೀವು ಅರಕಲಗೂಡಿನವರಲ್ಲವೇ ? ನಮ್ಮ ತಾತಂದಿರೂ ಅಲ್ಲಿಯೇ ಇದ್ದರು. ನಾನು ಹುಡುಗನಾಗಿದ್ದಾಗಿನಿಂದ ನಿಮ್ಮ ಮನೆತನದ ವಿಚಾರ ಹೇಳುತ್ತಿದ್ದರು. ಈಗ ಮೊನ್ನೆ ಮೊನ್ನೆ ತಾವು ಈ ಊರಿನಲ್ಲೇ ಇರುವಿರೆಂದು ಸುದ್ದಿ ಗೊತ್ತಾಯಿತು. ಶ್ಯಾನುಭೋಗ ರಾಮಣ್ಣನವರು ಹೇಳಿದರು. ಏನೋ ದೇವರ ಮಾಯೆ. ಅವನ ಲೀಲೆ. ತಮಗೂ ಒಂದೆರಡು ಕಷ್ಟಗಳು ಬಂದೇ ಬರುವುವು. ಜೀವನದಲ್ಲಿ ಸಾವಿಲ್ಲದೇ ಇರುತ್ತದೆಯೇ ? ಅದಕ್ಕಾಗಿ ಕೊರಗಿ ಕೊರಗಿ ಮುಂಬರುವ ಜೀವನವನ್ನು ಕಹಿ ಮಾಡಿಕೊಳ್ಳಬಾರದು, ' ಇತ್ಯಾದಿ.

ನನಗೆ ಆಶ್ಚರ್ಯ ! ಅರಕಲಗೂಡೇನೋ ನಮ್ಮ ಸ್ಥಳ ಹೌದು ಆದರೆ ನಮ್ಮ ಮುತ್ತಾತ ಅಲ್ಲಿಂದ ಪೋಲೀಸಿನವರ ಕಣ್ಣಿಗೆ ಮಣ್ಣು ಹಾಕಿ ತಪ್ಪಿಸಿಕೊಂಡು ಬಂದಾಗಿನಿಂದ, ನಮ್ಮ ತಾತ, ತಂದೆ, ತತ್ಕಾಲಕ್ಕೆ ನಾನೂ ಕೂಡ ಆ ಊರಿನ ಮುಖವನ್ನು ಕಾಣೆವು.

ಅರಕಲಗೂಡು, ನಮ್ಮ ಹೆಸರಿನ ಹಿಂದೆ, ಒಂದು ಹೆಸರಾಗಿ ಉಳಿದಿದೆಯೇ ಹೊರತು, ಬೇರೊಂದಿಲ್ಲ—ಆ ಊರಿನ ಸುದ್ದಿಯೆಲ್ಲಾ ಹೇಳುತ್ತಾನೆ ಈ ಮುದುಕ. ನಮ್ಮನೆ ನಾಯಿ ಸತ್ತಿದ್ದು ಇವನಿಗೆ ಹೇಗೆ ಗೊತ್ತಾಯ್ತು. ನಾವೇನೂ ದಿನಪತ್ರಿಕೆಯಲ್ಲಿ ಜಾಹೀರಾತು ಮಾಡಿಸಿದ್ದಿಲ್ಲ—ಇದಕ್ಕೆಲ್ಲಾ ವೇದಾಂತ ಬೇರೆ ಹೇಳುತ್ತಾ ಇದ್ದಾನೆ. ಯಾಕೆ ?

ಆತ ಮೆಲ್ಲಮೆಲ್ಲನೆ ಮುಂದುವರೆಸಿದ. " ರಾಯರೇ-ನನಗೆ ಆರು ಜನ ಹೆಣ್ಣು ಮಕ್ಕಳು—ಐದು ಜನಕ್ಕೆ ಹೇಗೋ ಈಶ್ವರನ ಸಹಾಯದಿಂದ, ಗಂಡು ಹುಡುಕಿ, ನನ್ನ ಗಂಡಾಂತರಗಳನ್ನು ತಪ್ಪಿಸಿಕೊಂಡೆ ಈ ಆರನೆ ಮಗಳ ಮದುವೆಮಾಡಿದರೆ, ನಾನು ರಿಟೈರ್ ಆಗುವುದಕ್ಕಿಂತ ಮುಂಚೆ ಮದುವೆ ಮಾಡಿದರೆ—ನಾನು ಬದುಕಿಕೊಂಡೆ. ಅವಳೂ ಕುದುರೆ ಹಾಗೆ ಬೆಳೆದಿದ್ದಾಳೆ—೨೦ ವರ್ಷ ಆಯಿತು ; ಕೆಲಸ ಬೋಪ ಎಲ್ಲಾ ಚೆನ್ನಾಗಿ ಮಾಡುತ್ತಾಳೆ. ಹನ್ನೆರಡು ರೂಪಾಯಿ ಪರೀಕ್ಷೆಗೆ ಕಟ್ಟಿದ್ದಳು. ನಾನೇ ಓದು ನಿಲ್ಲಿಸಿದೆ- ಮಕ್ಕಳು ಮರಿ ನೋಡಿಕೊಳ್ಳುವುದರಲ್ಲಿ ಎತ್ತಿದ ಕೈ. ತಾವು ದೊಡ್ಡ ಮನಸ್ಸುಮಾಡಿದರೆ- ನಾನು ಬದುಕಿಕೊಂಡೆ " ಎಂದ.

ನನಗೆ ಝುಂಗಾಬಲ ಉಡುಗಿ ಹೋಯ್ತು. ಅಲ್ಲಾ, ಇವತ್ತು ಬೆಳಗ್ಗೇ ತಾನೆ ನನ್ನ ಹೆಂಡತಿ ನನಗೆ ಕಾಫಿ ತಂದುಕೊಟ್ಟಿದ್ದಳು. ದಿಟ ! ನಾನು ಅವಳನ್ನು

ನೋಡಿ ಸುಮಾರು ಒಂದು ಗಂಟೆ ಆಗಿತ್ತು. ಅಷ್ಟರಲ್ಲೇ ಅವಳು– ಕೈಬಿಟ್ಟಿದ್ದಳೇ– ಅಡಿಗೆ.ಮನೆಗೆ ಹೋಗಿ ನೋಡಿಕೊಂಡು ಬರಲೇ ಎನ್ನಿಸಿತು ಮನಸ್ಸು – ಅಷ್ಟರಲ್ಲೇ ಬುದ್ಧಿ ಬಂತು. ಎಲಾ ! ಈ ಮುದುಕ ಹುಚ್ಚನೇ—ಆರು ಹೆಣ್ಣು ವರಸೆಯಾಗಿ ಹೆತ್ತರೆ ಹುಚ್ಚು ಹಿಡಿಯುದೇ ಏನಾಗುತ್ತೆ– ನಮ್ಮ ಸಮಾಜದಲ್ಲಿ – ಅಥವಾ – ಇದ ರಲ್ಲೇನಾದರೂ ಮೋಸ ಇರಬಹುದೇ ಎನ್ನಿಸಿತು. ಇದಕ್ಕೆ ಒಂದೇ ಮದ್ದು. ಅದನ್ನು ಪ್ರಯೋಗಿಸಿಯೇ ಬಿಡಬೇಕು. ಎಷ್ಟೇ ಕಹಿಯಾಗಿರಲಿ ಮುದುಕನಿಗೆ – ಎಂದು. ‘ ಲಚ್ಚೂ’ ಎಂದು ಕೂಗಿದೆ,—

ಒಳಗಿಂದ, ‘ಏನೂಂದ್ರೆ’ ಎಂದು ಮಾರ್ದನಿ ಕೊಟ್ಟಿತು. ಒಂದೆರಡು ನಿಮಿಷ ದಲ್ಲೇ– ಒಂದು ಕಸೂತಿ ಉಂಡೆ, ಎರಡು ನಿಟ್ಟಿಂಗ್‌ನೀಡಲ್ ಎಡಗೈಯಲ್ಲಿ– ಒಂದು ಸೌಟನ್ನು ಬಲಪಾಣಿಗ್ರಹಣ ಮಾಡಿಕೊಂಡು, ನನ್ನ ಲಚ್ಚು ಕೊಠಡಿಯೊಳಗೆ ಇನ್ನಾರಾದರೂ ಇದಾರೋ ಇಲ್ಲವೋ ಅದನ್ನೂ ನೋಡದೆ, ನುಗ್ಗಿಯೇ ಬಿಟ್ಟಳು. ನೋಡಿದಳು ನನ್ನ ಪೆಂಗು ಮುಖವನ್ನು, ನಂತರ ನೋಡಿದಳು ಎದುರಿಗಿದ್ದ ಆಗಂತುಕನನ್ನು. ಒಮ್ಮೆಲೇ, ಹಾವಭಾವಗಳನ್ನು ಗೃಹಿಣಿಯ ರೂಪಿಗೆ ತಿರುಗಿಸಿ, ಬಾಗಿಲ ಕಡೆಗೆ ಹಿಂಪೊರಡುತ್ತಾ, ‘ ಏನು ಕರೆದಿರಿ ’ ಎಂದಳು ಈ ಹರಿಣಿಯು ಹಿನ್ನಡೆ ಇಷ್ಟು ಸೊಗಸಾಗಿರುತ್ತದೆ ಎಂದು ಅಂದೇ ನನಗೆ ತಿಳಿದುದು ‘ ಏನೂ ಇಲ್ಲ. ರಾಯರು ಬಂದಿದ್ದಾರೆ—ಸ್ವಲ್ಪ ಕಾಫಿ ಮಾಡಿ ಕಳಿಸು ’ ಎಂದು, ಆಕೆ ಯನ್ನು ಬೀಳ್ಕೊಟ್ಟೆ –

ಆಕೆಯೂ ಅಡಿಗೆ ಮನೆಗೆ ಅಂತರ್ಧಾನಳಾದಳು.

ಆಗಂತುಕ ರಾಯರನ್ನು ನೋಡಿದೆ ಕೆಳದುಟಿ ಕೆಳಕ್ಕೆ ಅಂದರೆ ಗಲ್ಲದ ಹತ್ತಿರಕ್ಕೆ ಬಿದ್ದುಬಿಟ್ಟಿದೆ. ಆ ದಂತಶೂನ್ಯ ಬಾಯಲ್ಲಿ ಒಂದು ರೀತಿಯ ನಿಟ್ಟುಸಿರು. ಗಂಟಲಲ್ಲಿ ಏನೋ ಶಬ್ದ. ನಾನೆದ್ದು ಹತ್ತಿರ ಹೋಗಿ ‘ ಏಕೆ, ಸ್ವಸ್ಥವಾಗಿಲ್ಲವೇ ? ನೀರು ತರಿಸಲೇ ?’ ಎಂದೆ.

ಇಲ್ಲದ ಎಂಜಲು ನುಂಗುತ್ತಾ ಆತ ತಿರುಗಿ ಜೀವಿಸಲು ಪ್ರಯತ್ನಪಟ್ಟ– ‘ ಆಕೆ –ಆಕೆ ಯಾರು ’ ? ಎಂದ.

‘ ನನ್ನ ಹೆಂಡತಿ. ನಾನು ಶಾಸ್ತ್ರೋಕ್ತವಾಗಿ ಪಾಣಿಗ್ರಹಣ ಮಾಡಿದ ನನ್ನೊ ಬ್ಬನ ಮಡದಿ ’ ಎಂದೆ.

‘ ಕ್ಷಮಿಸಿ ರಾಯರೆ, ಯಾರೋ ಮೊನ್ನೆ ಹೇಳಿದರು. ಎರಡನೆ ಮದುವೆಗೆ ನಮ್ಮವರೊಬ್ಬರು ಈ ಬೀದಿಯಲ್ಲಿ ಇದ್ದಾರೆ ಎಂದು– ನಿಮ್ಮನೆಯಲ್ಲಿ ಎಲ್ಲರೂ ಆಳು ತ್ತಿದ್ದರು ಎಂದು ಇನ್ನಾರೋ ಹೇಳಿದರು. ಒಂದಕ್ಕೊಂದು ಗಂಟು ಹಾಕಿ ನಾನು

ನಿಮ್ಮನೆಗೆ ಬಂದೆ. ನೀವೇನೂ ಅಂದುಕೋಬೇಡಿ. ಒಳ್ಳೆಯ ವರ, ಎಳಕಾದ ಮುಖ ಸಿಕ್ಕಿತು ಅಂದುಕೊಂಡು ಬಂದೆ. ಹೆಣ್ಣು ಹೆತ್ತವರಪಾಡು ನಿಮಗೆ ಗೊತ್ತಿಲ್ಲ ರಾಯರೇ! ಮುಳುಗುತ್ತಿರುವವನು ಹುಲ್ಲುಕಡ್ಡಿ ಹಿಡಿದುಕೊಂಡು ಬದುಕುಬೇಕು ಎಂದು ಆಶೆ ಪಡುವಂತೆ, ಅವರಿವರು ಹೇಳಿದ ಸುದ್ದಿ ಹಿಡಿದುಕೊಂಡು ನಾವೂ ಕೃತಾರ್ಥರಾಗಬೇಕು ಎಂದು ಒದ್ದಾಡುತ್ತೇವೆ. ಈ ಗೋಳಿನಲ್ಲಿ ಈಗ ಆದ ಹಾಗೆ ಒಂದೆರಡು ಸಾರಿ ಪೆಚ್ಚು ತಿನ್ನುವುದೂ ಉಂಟು – ದಯವಿಟ್ಟು ಕ್ಷಮಿಸಿ – ಹೋಗಿ ಬರುತ್ತೇನೆ ' ಎಂದು ಎದ್ದರು.

ಅಷ್ಟು ಹೊತ್ತಿಗೆ ಕಾಫಿ ಬಂತು– ಕಾಫಿ ಕುಡಿದುಕೊಂಡು ಹೋಗಿ ಎಂದು ಬಲಾತ್ಕರಿಸಿ ಕಾಫಿ ಕುಡಿಸಿ ಅವರನ್ನು ಕಳಿಸಿ ಕೊಟ್ಟೆ. ಹೆಂಡತಿಗೆ ವಿಶದವಾಗಿ ಹೇಳಿದೆ. " ನೋಡೆ! ಈಗಲೂ ಕೂಡ ಹೆಣ್ಣು ಕೊಡಲು ಮೇಲೆ ಬಿದ್ದು ಬರುತ್ತಾರೆ. ಜೋಕೆ! ನೀನೇನಾದರೂ ಹೇಳಿದ ಹಾಗೆ ಕೇಳದೆ ಇದ್ದರೆ ಸವತೀ ಸಂಸಾರಕ್ಕೆ ನೀನೇ ಮಣೆಹಾಕಿದ ಹಾಗೆ ಆಗುತ್ತೆ " ಎಂದು.

ಅವಳೇನೋ ಅಂದಳು– ' ಬಿಡಿ ಅಂದರೆ ನಾನಿಲ್ಲ ಅಂತ ಅವರು ಬಂದರು— ನಾನಿರೋ ತನಕ ನಿಮಗೆ ಯಾರು ಹೆಣ್ಣು ಕೊಡ್ತಾರೆ ?'—

ಇದು ಯುದ್ಧ ಸುದ್ದಿಯಾಗಿದ್ದ ಕಾಲದಲ್ಲಿ –

ಹಿಟ್ಲರು ಸತ್ತಿದಾನೋ ಇಲ್ಲವೋ ಎಂಬ ಸುದ್ದಿ ಶುರುವಾಗಿ ಮೂರು ತಿಂಗಳಾಗಿತ್ತು. ೧೯೪೬ನೇ ಇಸವಿ. ಈ ವೇಳೆಗೆ ನನಗೆ ಆರು ಹೆಣ್ಣು ವರಸೆಯಾಗಿ· ರೇಷ್ಮ ಸಂಸಾರ ಹೇಗೋ ಮಾಡುತ್ತಿದ್ದೆವು. ಅರೆ ಹೊಟ್ಟೆಗಾದರೆ ಅರೆ ಬಟ್ಟೆಗಿಲ್ಲ. ಮೊದಲನೆ ಮಗಳು ಇಂಟರ್‌ಮೀಡಿಯೇಟಿಗೆ ಕಟ್ಟುತ್ತಿದ್ದಳು. ಎರಡನೆಯವಳು ಮೆಟ್ರೀಕ್‌ಗೆ ಕೂಡುವಳಿದ್ದಳು. ಇದೇ ರೀತಿ ಕೊನೆಯ ತನಕ, ಕ್ಲಾಸ್‌ವಾರ್ ವಯಸ್ಸಿನ ಮಕ್ಕಳು

ನನ್ನ ಹಿರೀ ಹುಡುಗಿ ಬಲು ಜಾಣೆ–ನನ್ನಂತೆಯೇ—ಬಲು ಚೆನ್ನಾಗಿ ಮಾತನಾಡುತ್ತಿದ್ದಳು. ಕಾಲೇಜಲ್ಲಿ ಚರ್ಚಾ ಕೂಟ ಏರ್ಪಡಿಸಿದಾಗ ಮಿಕ್ಕ ಕಾಲೇಜ್ ಹುಡುಗರನ್ನು ವಾಗ್ಯುದ್ಧದಲ್ಲಿ ಸೋಲಿಸಿ, ತಾನೇ ಮೊದಲ ಬಹುಮಾನವನ್ನು ಸಂಪಾದಿಸಿದ್ದಳು, ಆ ಬಹುಮಾನದ ಬೆಳ್ಳಿ ಪಾತ್ರೆ ನನಗೆ ತೋರಿಸಿದಾಗ ನಾನು ಕೇಳಿದೆ, 'ಏನಮ್ಮಾ! ಇನ್ನು ಯಾರು ಯಾರು ಚೆನ್ನಾಗಿ ಮಾತನಾಡಿದರು?' ಎಂದು. 'ಮೆಡಿಕಲ್ ಕಾಲೇಜ್ ಪ್ರತಿನಿಧಿಗೆ ಎರಡನೆ ಬಹುಮಾನ ಸಿಕ್ಕಿತು. ಇದ್ದದರಲ್ಲಿ ಸ್ವಲ್ಪ ಚೆನ್ನಾಗಿ ಮಾತನಾಡಿದ ಅಣ್ಣ! ಮಾತಿಗೆ ಮಾತು ಸರಿಯಾಗಿ ಜೋಡಣೆ ಮಾಡುತ್ತಾ ಇದ್ದ. ಆದರೆ ಅದೊಂದು ವಕ್ರವಾದ ಅಭ್ಯಾಸ, ಮಾತಾಡುತ್ತಾ ಇರೋವಾಗ, ಕಾಣದ ಸಾಬೂನ ಹಾಕಿ ಕೈತೊಳೆಯುತ್ತಾ ಇರುತ್ತಾನೆ. ನನಗೆ

ಪ್ರಥಮ ಬಹುಮಾನ ಬಂದ ದಿನ, ಸಭೆ ಮುಗಿದಮೇಲೆ, ಅವನು ಅಭಿವಂದಿಸಲು ಬಂದಾಗ ಕೂಡ- ಇದೇ ಕೈತೊಳೆಯಾಟಮಾಡುತ್ತಲೇ ಇದ್ದ. ನನಗೂ ನಗು ಬಂತು ಅದೇರೀತಿ ನಾನೂ ಕಾಣದ ಸಾಬೂನಿನಲ್ಲಿ ಕೈ ತೊಳೆಯುತ್ತಾ "ಬಹಳ ವಂದನೆಗಳ್ರಿ" ಎಂದು ಬಳುಕಿದೆ. ಎರಡು ತೋಳುಗಳನ್ನೂ ಒಂದು ರೀತಿಯಾಗಿ ಸೆಟೆದು ಹೀಗೆ ಕೈ ತೊಳೆದುದನ್ನು ಅವನು ಹೇಗೆ ಮಾಡುತ್ತಿದ್ದನೋ – ಹಾಗೇ ನಾನು ಮಾಡಿದ್ದನ್ನು ನೋಡಿ ನನ್ನ ಜತೆಗಾರ್ತಿಯರೆಲ್ಲಾ ಬಿಕ್ಕಿಬಿಕ್ಕಿ ನಗಲಾರಂಭಿಸಿದರು. ಅವನಿಗೆ ನಗು ಕೇಳಿಸಿತು. ಕಾರಣ ಗೊತ್ತಾಗಲಿಲ್ಲ. ನಾಯಿ ಕಂಡ ಬೆಕ್ಕಿನಂತೆ ಬೆನ್ನು ಬಗ್ಗಿಸಿಕೊಂಡು ಕಿರುಬೆವರು ಕಾಣಿಸಿಕೊಂಡು ಕಾಲಿಗೆ ಬುದ್ಧಿ ಹೇಳಿದ. ಏನಣ್ಣಾ ! ಈಗಿನ ಕಾಲದ ಹುಡುಗಂಗೆ ಸ್ವಲ್ಪವಾದರೂ ಛಾತಿ ಇಲ್ಲ ವಲ್ಲಾ. ಹೆಣ್ಣು ಮಕ್ಕಳನ್ನು ಕಂಡರೆ ಹೆದರಿಕೊಂಡು ಹೋಗ್ತಾರೆ. ನಾವು ಮಾತನಾಡಿದರೆ ಬಾಯ್ ಬಾಯ್ ಬಿಡ್ತಾರೆಯೇ ವಿನಹಾ ಸರಿಯಾಗಿ ಧ್ವನಿ ಕೂಡ ಹೊರಡುಲ್ಲ. ಇಂತಹರಿಂದ ದೇಶ ಉದ್ಧಾರವಾಗುತ್ತ್ಯೇನಣ್ಣಾ ? ಸ್ವಲ್ಪ ಧೈರ್ಯ, ಚೂಪು ನಾಲಿಗೆ ಇದ್ದ ನಮ್ಮಂತಹ ಹೆಣ್ ಕಾಲೇಜಿನವರಿಂದಲೇ ಇನ್ನು ಮುಂದೆ ದೇಶ ಉದ್ಧಾರವಾಗಬೇಕು. ನಾನೇನೋ ಆಗಲೇ'– ವಿಜಯಲಕ್ಷ್ಮಿ, ಕಮಲಾ ದೇವಿ, ಲಕ್ಷಮ್ಮ, ಇವರ ಹಾದಿಯಲ್ಲೇ ಹೋಗಬೇಕೆಂದು ಮನಸ್ಸು ಮಾಡಿದ್ದೇ ನಣ್ಣಾ ! ' ಎಂದಳು. "ಇರಲಮ್ಮಾ ಓದು ಮುಗಿಸು, ಅಲ್ಲಿನ ತನಕ ಏಕೆ ಭವಿಷ್ಯದ ಮಾತು ? ಸರಿಯಾದ ವರ ಸಿಕ್ಕರೆ ಮದುವೆಮಾಡೋಣ ಎಂದಿದ್ದೆ. ಇಬ್ಬರೂ ಕೂಡಿ ದೇಶಸೇವೆ ಮಾಡಿದರೆ ಇನ್ನೂ ಚೆನ್ನಲ್ಲವೇ ಎಂದಂದುಕೊಂಡಿದ್ದೆ – ಈಗ ಯಾಕೆ ಅದರ ಯೋಚನೆ ?" ಎಂದು ಮಾತು ಮುಗಿಸಿದ್ದೆ.

ಒಂದು ದಿನ ಸಾಯಂಕಾಲ ಬೇಗ ಮನೆಗೆ ಬಂದಿದ್ದೆ– ಏಕೆಂದರೆ, "ಮಕ್ಕಳ ಸಾಕುವ ವಿಧಾನ"ದ ಮೇಲೆ ನನ್ನ ಹೆಂಡತಿ ಉಪನ್ಯಾಸ ಕೊಡಲು ವನಿತಾ ಸಮಾಜಕ್ಕೆ ಹೋಗಬೇಕಾಗಿತ್ತು. ಹಿರಿಯ ಮಗಳು, ಕೊತ್ತುಂಬರೀ ಸೊಪ್ಪಿನಲ್ಲಿ ಹುಳಿ ಮಾಡುವದು ಹೇಗೆ ? ಅದೇ ಸೊಪ್ಪಿನ ಪಲ್ಯ ಮಾಡುವ ವಿಧಾನ ಈ ರೀತಿ ಎಂಟು ಒಂಭತ್ತು ಅಡಿಗೆ ಪದಾರ್ಥಗಳನ್ನು, ತಾನು ವಿರಾಮ ಕಾಲದಲ್ಲಿ ಕೆಮಿಸ್ಟ್ರಿ ಲ್ಯಾಬೋರೇಟರಿಯಲ್ಲಿ ನಡೆಸಿದ ಪ್ರಯೋಗಗಳನ್ನು ಕುರಿತು ಭಾಷಣ ಮಾಡಲು ಹೋಗಿದ್ದಳು. ಅಂದಮೇಲೆ ಚಿಕ್ಕ ಚಿಕ್ಕ ಮಕ್ಕಳು, ಮನೆ, ನೋಡಿಕೊಳ್ಳಲು ನಾನು ಬೇಗ ಬಂದಿದ್ದೆ—ಅಡಿಗೆ ಮನೆಗೆ ಹೋಗಿ ರಾತ್ರಿ ಅಡಿಗೆಗೆ ಒಲೆ ಹಚ್ಚಿ, ಅನ್ನ, ಸಾರಿಗೆ, ನೀರು ಕುದಿಯಲಿಕ್ಕೆ ಇಟ್ಟು ಆಗತಾನೇ ಎರಡು ಚಿಕ್ಕ ಮಕ್ಕಳ ಜಗಳ ನಿಲ್ಲಿಸಿ, ಹಜಾರಕ್ಕೆ ಬಂದಿದ್ದೆ. ಯಾರೋ ಕೂಗಿದ ಹಾಗಾಯ್ತು. "ರಾಯರೇ ! ರಾಯರೇ !" ಎಂದು. ಮೆದುವಾದ ಧ್ವನಿ, ದೈನ್ಯತಾಪರಿಪೂರ್ಣವಾದ ಗಂಟಲು. ಈ ಗಂಡು ಕೋಗಿಲ ಕಂಠ ಯಾರದು ಎಂದು ಹೊರಗೆ ಹೋಗಿ ನೋಡುತ್ತೇನೆ – ಆಗಂತುಕ—"ಬನ್ನಿ ಒಳಕ್ಕೆ, ಏನು ಬೇಕಾಗಿತ್ತು ?" ಎಂದು ಹೇಳುತ್ತಾ ಒಳಕ್ಕೆ ಕರೆದುಕೊಂಡು ಹೋಗಿ ಕುಳ್ಳಿರಿಸಿದೆ. ಠೀಕು ಠಾಕಾಗಿ ನೀಲಿ ಸೂಟು ಹಾಕಿದ್ದಾನೆ.

ಗರವಾಗರಂ ರುಮಾಲು, ಲಕ್ಷಣವಾಗಿ ಕಟ್ಟಿದ್ದಾನೆ. ಕಿವಿಯಲ್ಲಿ ಹಳೇ ಕಾಲದ ಗಂಡು ಹತ್ತು ಕಡುಕು. ದೃಷ್ಟಿಬಟ್ಟಿನಂತಿದ್ದ ಸಾದು. ಜಾತಕದ ರೀತಿಯಾಗಿ



ರಿಟೈರ್ ಆಗಬೇಕಾಗಿತ್ತು ಎನ್ನುವ ವಯಸ್ಸು – ಆದರೂ ಮುಖದಲ್ಲಿ ಒಂದು ದೈನ್ಯತೆ. ಒಂದು ಕಳಂಕ. ಒಂದು ಭಿಕ್ಷುಗಾರನ ಕಳೆ- ದೈನ್ಯದ ದನಿಯಲ್ಲೇ ಶುರುಮಾಡಿದ. ಮಾತ ನಾಡಲಾರಂಭಿಸಿದರೆ, ಇವನೂ ಕಾಣದ ಸಾಬೂನಿನಲ್ಲಿ ಕೈ ತೊಳೆ ಯುತ್ತಿದ್ದಾನೆ.

" ನಿಮ್ಮ ಬೇಟಿಯಾಗಬೇಕೆಂದು ತುಂಬಾ ಆತುರವಾಗಿದ್ದೆ— ಕಬ್ಬಿಣದ ಕಂಪನಿ ರಾಮರಾಯರು ನಿಮಗೆ ಪರಿಚಯ ಮಾಡಿಸಿ ಕೊಡುತ್ತೇನೆ ಎಂದು ಹೇಳಿದ್ದರು. ಮೂರು ದಿನಗಳಿಂದ ಸಿಕ್ಕಲಿಲ್ಲ – ಅದಕ್ಕಾಗಿ ನಾನೇ ಬಂದೆ. ನಾನು ಕಂಟ್ರೋಲರ ಕಛೇರಿಯಲ್ಲಿ ಸೂಪ ರಿಂಟೆಂಡೆಂಟ್ ಆಗಿದ್ದೇನೆ. ನಮ್ಮ ಹುಡುಗ ಈಗ ತಾನೇ ಮೆಡಿಕಲ್ ಕಾಲೇಜಿನಲ್ಲಿ ಕಡೆಯ ವರ್ಷದ ಪರೀಕ್ಷೆಗೆ ಕುಳಿತಿದ್ದಾನೆ. ೨೫–೨೬ ವಯಸ್ಸಾಗಿದೆ – ಬುದ್ಧಿವಂತ ಹುಡುಗ. ಈ ವರ್ಷ ನಾವೂ ಅವನ ಮದುವೆ ಮಾಡಿ ಕಣ್ಣಿಂದ ನೋಡಿಬಿಡಬೇಕು ಎಂದು ಇದ್ದೇವೆ. ಆದರೆ ಅವನಿಗೆ ಓದಿದ, ಅನುರೂಪಳಾದ, ಹೆಣ್ಣು ಸಿಗುವ ತನಕ ಅವನು ಮದುವೆಗೆ ಒಪ್ಪುವಂತಿಲ್ಲ. ನಿಮಗೆ ಚೂಟಿಯಾದ ಹೆಣ್ಣುಮಗಳು ಇದ್ದಾಳೆಂದು ಕೇಳಿದೆ. ಜಾತಕ ತೆಗೆದು ಕೊಂಡು ಹೋಗೋಣ ಹಾಗೂ ನಿಮ್ಮ ಮನಸ್ಸಿನಲ್ಲಿ ಮಗಳ ಮದುವೆಯ ವಿಚಾರ ಏನುಯೋಚನೆ ಮಾಡಿದ್ದೀರಿ ಕೇಳಿ ಹೋಗೋಣ ಎಂದು ಬಂದೆ "– ಅಂದರು. ಕೈ ಕೈ ತೊಳೆಯುವುದನ್ನು ನಿಲ್ಲಿಸಿದರು.

ನನ್ನ ಮನಸ್ಸಿನಲ್ಲಿ ನಾನೂ ಹುಡುಗೀಗೆ ಮದುವೆ ಮಾಡಬೇಕೆಂದೇ. ಆದರೆ ಹುಡುಗಿ ಒಪ್ಪಬೇಕಲ್ಲ ? – ಅವರಮ್ಮ ಅವಳು ಹೇಳಿದ ಹಾಗೆ ಕೇಳ್ತಾಳೆಯೇ ಹೊರತು ನನಗೆ ಬೆಂಬಲ ಕೊಡಳು. ಅಣಿಯಾದ ಅಳಿಯ ಮನೆಗೆ ಬಂದು ಕೇಳಿ

ಕೊಂಡರೆ ಬೇಡ ಎಂದು ಕಳಿಸಬಹುದೇ ? ಏನೋ ಲೋಕವ್ಯವಹಾರ ರೀತಿಯಾಗಿ "ರಾಯರೇ – ಈ ವರ್ಷ ನಾನೂ ಮದುವೆ ಮಾಡಬೇಕೆಂದಿದ್ದೇನೆ ಜಾತಕದ ಕಾಪಿ ಶಾಸ್ತ್ರಿಗಳ ಮನೆಯಿಂದ ತರಿಸಿ ಕೊಡ್ತೇನೆ - ಇನ್ನೆರಡು ದಿನ ಬಿಟ್ಟು ಬನ್ನಿ. ಇನ್ನೊಂದು ಸಾರಿ ಬರುವಾಗ ನಿಮ್ಮ ಹುಡುಗನನ್ನೂ ಕರೆದು ತಂದರೆ ಚೆನ್ನಲ್ಲವೇ" ಅಂದೆ. 'ಓಹೋ ! ನಾಡಿದ್ದು ಸಾಯಂಕಾಲ ಬರ್‍ತೇನೆ. ಹುಡುಗನನ್ನೂ ಕರೆದು ತರುತ್ತೇನೆ' ಎಂದು ಹೇಳಿ ಹೊರಟರು.

ಅವರು ಇನ್ನೂ ಗೇಟು ದಾಟಿದ್ದರೋ ಇಲ್ಲವೊ - ಅಷ್ಟರಲ್ಲೇ ನನ್ನ ಹಿರಿಯ ಮಗಳೂ ಒಳಕ್ಕೆ ಬಂದಳು. 'ಯಾರಣ್ಣಾ ಅವರು ?' ಎನ್ನುತ್ತಲೇ ಒಳಕ್ಕೆ ಬಂದಳು. "ನಿನಗೆ ಗಂಡು ಕೊಡುಕ್ಕೆ ಬಂದಿದ್ದರಮ್ಮಾ. ಅವರ ಮಗ ಮೆಡಿಕಲ್ ಕಾಲೇಜಿನಲ್ಲ ಓದುತ್ತಿದ್ದಾನಂತೆ; ಬುದ್ಧಿವಂತನಂತೆ – "ಓದಿದ ಹುಡುಗಿ ಮದುವೆ ಯಾಗಬೇಕು ಇಲ್ಲದಿದ್ದರೆ ಮದುವೆಯೇ ಬೇಡ" ಎಂದು ಹಠ ಹಿಡಿದಿದ್ದಾನಂತೆ – ಅವರಿಗೂ ವಯಸ್ಸಾಯಿತು ಬೇಗ ಮಗನ ಮದುವೆ ನೋಡಿಯೇ ಬಿಡಬೇಕು ಎಂದು ಇಲ್ಲಿಗೆ ಬಂದಿದ್ದರು."

'ಅವರ ಕೈ ನೋಡಿದೆಯಣ್ಣಾ ?' ಎಂದಳು. ನನ್ನ ಹುಡುಗೀಗೆ ಕಣ್ಣು ಬಲು ಚುರುಕು - ನಾಲಿಗೆಯಷ್ಟೇ ಚುರುಕು, 'ನೋಡಿದೇಮ್ಮಾ' ಅಂದೆ. "ಆ ಹುಡುಗನ ತಂದೆ ಇವರೇ ಅಂತ ಕಾಣುತ್ತೆ. ಅವನೂ ಇವರ ಹಾಗೇ ಮಾತನಾಡುವಾಗೆಲ್ಲಾ ತೋಳು ಸೆಟೆಕೊಂಡು ಕಾಣದ ಸಾಬೂನಿನಲ್ಲಿ ಕೈ ತೊಳೆ ಯುತ್ತಾನಣ್ಣಾ" ಎಂದು ಅವರನ್ನು ತಾನೂ ಅಣಕಿಸಿದಳು – 'ಹುಡುಗ ಒಪ್ಪಿ ಗೆಯೇ ನಿನಗೆ ?' ಎಂದೆ. 'ನಾನು ನೋಡಿ ಎರಡು ವರ್ಷ ಆಯಿತಣ್ಣಾ, ಬರಲಿ ನೋಡೋಣ. ನನ್ನ ಭಾವೀ ಜೀವನಕ್ಕೆ ಅಡ್ಡಿ ಬರದಿದ್ದರೆ ಅಮ್ಮ ಒಪ್ಪಿದರೆ ನೋಡೋಣ' ಎಂದು ಒಳಕ್ಕೆ ಹೋದಳು.

ಮೂರನೇ ದಿನ ತಂದೆ ತಾಯಿ ಮಗ ಬಂದರು. ಹಣ್ಣು ಹೂವು ತಂದರು. ಎಲ್ಲರೂ ಕ್ಷೇಮಸಮಾಚಾರ ಕೇಳಿದೆವು. ಆ ಮಾತು ಈ ಮಾತು ಆಡಿದೆವು – ಬೆಣ್ಣೆ ಗಾದರೆ ಇಜ್ಜಲಿಗಿಲ್ಲ— ಇಜ್ಜಲಿಗಾದರೆ ಅಕ್ಕಿ ಇಲ್ಲ – ಎಲ್ಲಾ ಇದ್ದರೆ ಮನೆಯೇ ಇಲ್ಲ- ಹೀಗಾದ ಕಾಲ. ಯುದ್ಧ ಮುಗಿದ ಮೇಲೆ, ನಾವು ಜಯಶಾಲಿಗಳಾದ ಮೇಲೆ, ಉಪವಾಸ ವನವಾಸ ಹೆಚ್ಚಾದುದು. ಇತ್ಯಾದಿ ಲೋಕಾಭಿರಾಮವಾಗಿ ಮಾತನಾಡಿ ಅವರು ತಂದ ಹಣ್ಣನ್ನೇ ನಾವೆಲ್ಲರೂ ತಿಂದು, ನಮ್ಮನೆ ಕಾಫಿ ಕುಡಿದು, ಅವರನ್ನು ಬೀಳ್ಕೊಟ್ಟೆ. ನನ್ನನ್ನು ಅವರು ಮುಂದಿನ ವಾರ ನೋಡುವುದಾಗಿ ಹೇಳಿ ಹೋದರು. ಶುಭಸ್ಯ ಶೀಘ್ರಂ ಅಂದು ಹೇಳುತ್ತಾ ಹೊರಹೊರಟರು.

ಆಮೇಲೆ ತೊಗೊಳ್ಳಿ ನಮ್ಮ ಮನೆಯಲ್ಲಿ ಚರ್ಚೆ: 'ಲಕ್ಷಣವಾದ ಹುಡುಗ, ಓದಿದವ. ಆತನಿಗೂ ತಕ್ಕಮಟ್ಟಿಗೆ ಆಸ್ತಿ. ಹೆಣ್ಣು ಮಕ್ಕಳಿಗೆಲ್ಲಾ ಮದುವೆಯಾಗಿದೆ ಯೆಂಬುದು ತಿಳಿಯಿತು. ಒಬ್ಬನೇ ಮಗ. ಅಕೆ ಒಡವೇನೂ ತಕ್ಕಮಟ್ಟಿಗೆ ಹಾಕಿ ದ್ದರು. ಸಂಪ್ರದಾಯಸ್ಥರಂತೆ ಕಾಣುತ್ತೆ. ಅಂದ ಮಾತ್ರಕ್ಕೇ ಕಂದಾಚಾರದವರು ಎನ್ನುವ ಹಾಗಿಲ್ಲ. ನನ್ನ ಕೇಳಿದರೆ ಮನೆಗೆ ಬಂದ ಅಳಿಯನ್ನ ಬಿಡಬಾರದು' ಎಂದೆ.

' ಸರಿ ! ಸರಿ ! ಸುಮ್ಮನಿರಿ ಅಂದರೆ, ಯಾವುದು ಸಿಕ್ಕಿದರೂ ಬಾಯಿಬಿಡುವ ಮಕ್ಕಳ ಚಾಲು ನಿಮಗೆ– ಅದೇನು ದುರಭ್ಯಾಸ ತಂದೆ ಮಗನಿಗೆ – ಆ ಕೈ ನೋಡಿದಿರೇನು, ಬಾಯಿ ಬಿಡುವುದೇ ತಡ ಕೈ ಕೈ ಹಿಸುಕುತ್ತಾರೆ. ಅವರ ಮಾತು ಕೇಳುವುದಕ್ಕೆ ಆಗುವುದಿಲ್ಲ ಆ ಕೈಗಳು ನೋಡುವ ಕುತೂಹಲದಲ್ಲಿ. ಹೀಗಾದರೆ ಎರಡು ಮಾತು ಕೂಡ ಆಡುವಹಾಗಿಲ್ಲ. ಇನ್ನು ಸಂಸಾರ ಹೇಗೆ ಮಾಡುವುದು ? ಇದೆಲ್ಲಾ ಯೋಚನೆ ಮಾಡಬೇಕಾದ ವಿಷಯ. ನಾನೂ ಇವಳೂ ಮಾತನಾಡಿಕೊಂಡು ಉತ್ತರ ಹೇಳುತ್ತೇವೆ. ನೀವು ಪೆಚ್ಚು ಪೆಚ್ಚಾಗಿ ಏನಾದರೂ ಮಾತನಾಡಿ ಬಂದ್ಬಿಟ್ಟೀರಿ ' ಎಂದಳು ನನ್ನ ಕೈ ಹಿಡಿದು ನಡೆಸುವಾಕೆ.

ಎರಡು ಮೂರು ದಿನಗಳಾಯ್ತು. ಊಟಮಾಡುತ್ತಾ ಕುಳಿತಿದ್ದಾಗ, ನನ್ನ ಮಗಳನ್ನು ಕೇಳಿದೆ. " ಏನಮ್ಮಾ ನಾಳೆ ನಾಡಿದ್ದರಲ್ಲಿ ಅವರು ಬರ್ತಾರೆ. ನೀನೂ ಅವಳೂ ಏನಾದರೂ ವ್ಯವಸ್ಥೆಮಾಡಿದ್ದೀರಾ ? " ಎಂದು. " ಇಲ್ಲ ಅಣ್ಣಾ ! ಈಗ ಮದುವೆ ಬೇಡ. ಇನ್ನೂ ಎರಡು ವರ್ಷ ಆಗಲಿ. ನನ್ನ ಜೀವನಕ್ಕೆ ನಾನು ಸಂಪಾದಿಸಿಕೊಳ್ಳುವ ಹಾಗಾದಮೇಲೆ ಅದರ ಮಾತನಾಡೋಣ "

' ಹಾಗಂದರೇನಮ್ಮ ! ನಿನ್ನ ಜೀವನಕ್ಕೆ ಹೊಣೆಯಾಗಲಿ ಅಂತಲೇ ಅಲ್ಲವೇ ಮದುವೆಮಾಡೋದು. ಅವನೂ ಹೇಳಿದ ಹಾಗೆ ಕೇಳಿಕೊಂಡು ಇರೋ ಹಾಗೆ ಕಾಣುತ್ತೆ. ಇದಕ್ಕೇನು ಅಭ್ಯಂತರ ? ಬಾಯಿಬಿಟ್ಟು ಅವರಿಗೆ ಹೇಳ್ತೇನೆ. " ಅವಳು ದೇಶೋದ್ಧಾರಕ್ಕಾಗಿ ಸಮಾಜಸೇವೆ ಮಾಡಬೇಕಂತಿದ್ದಾಳೆ– ಅದಕ್ಕೆ ಅಡ್ಡಿ ಬರದೆ ಆತಂಕ ತರದೇ ಇದ್ದರೆ ಮದುವೆ ಸಾಧ್ಯ" ಎಂದು. ಬೇಕಾದರೆ ಕರಾರು ಮಾಡಿದರೆ ಆಯಿತು ಈಗ ನಿಮ್ಮ ಅಮ್ಮ ಇಲ್ಲವೇ ! ಅವಳು ಸಮಾಜ ಸೇವೆಮಾಡುತ್ತಿಲ್ಲವೇ ? ಮದುವೇನೂ ಆಗಿಲ್ಲವೇ ' ಎಂದೆ 'ಇಲ್ಲ ಅಣ್ಣಾ, ಈಗ ಬೇಡ. ಅಮ್ಮ ಹೇಳಿದ್ದು ದಿಟ. ಅವಳೇನೋ ಸಮಾಜಸೇವೆ ಮಾಡಲು ನೀನು ಅಡ್ಡಿ ಬರುವುದಿಲ್ಲ. ಸಂಸಾರದ ಆತಂಕ ಇಲ್ಲದ ಹಾಗೆ ನೋಡಿಕೊಳ್ಳುತ್ತೀ ಅಣ್ಣ ! ಆದರೆ—ಆರು ಮಕ್ಕಳನ್ನು ಕಟ್ಟಿಕೊಂಡು ಸಮಾಜಸೇವೆ ಮಾಡುವುದು ಕಷ್ಟ ಅಣ್ಣಾ ! ಇದೆಲ್ಲಾ ಯೋಚನೆಮಾಡಬೇಕಾದ್ದು ' ಅಂದೇ ಬಿಟ್ಟಳು.

ನೀವನ್ನಬಹುದು, ಹುಡುಗಿಯರು ತಂದೆಯ ಹತ್ತಿರ ಹೀಗೆ ಮಾತನಾಡುತ್ತಾರೆಯೇ ಎಂದು ಪಾಪ ! ನಿಮಗೇನು ಗೊತ್ತು ನಮ್ಮ ಸಂಸಾರದ ಒಳಗುಟ್ಟು.

ಕಡೆಗೂ ಇವರ ಪಾಡು ನೋಡಿದಿರಾ ! ಯುದ್ಧ ಸುದ್ದಿಯಾಗಿದ್ದ ಕಾಲದಲ್ಲಿ ಹೆಣ್ಣು ಹೆತ್ತವರು ಅಳಿಯನ ಕೈಲಿ ಕುಕ್ಕಿಸಿಕೊಳ್ಳಬೇಕಾಗಿತ್ತು.

ಯುದ್ಧ ಮುಗಿದ ಮೇಲೆ ನೋಡಿ. ಅಳಿಯನ ಕಡೆಯಿಂದ ಕುಕ್ಕಿಸಿಕೊಳ್ಳುವುದು ಇಲ್ಲ ದಿಟ ! ಆದರೆ ಹೆತ್ತ ಮಗಳ ಕೈಲೇ ಕುಕ್ಕಿಸಿಕೊಳ್ಳಬೇಕು !

ಅಂತೂ ಇಂತೂ ಕುಂತೀನ ಹೆತ್ತವರ ಪಾಡು, ಕುಕ್ಕಿಸಿಕೊಳುವುದೇ ?

———— 0 ————